ರದ ವ್ಹಿ. ಕುಲಕರ್ಣಿ ಮತ್ತು ಸುರೇಶ
... ದುರ್ಗ ಕರರನು ಶ್ರೀ. ಎನ್.
... ವದು

ಮೈಸೂರ ಪಬ್ಲಿಕ ಸರ್ವೀಸ ಕಮೀಶ
ನಿನ ಸದಸ್ಯ ... ಮುಖ್ಯ ... ಬರುವರು ಈ
ಸಮಾರಂಭವು ... ಬೋರ್ಡ್ಸ ... ಸ್ಕೂಲದಲ್ಲಿ ಸಂಜೆ ... ಗಂಟೆಗೆ ಜರು
ಗುವದು.





## ಕಾರ್ಯಕ್ರಮಗಳು

೧೮-೬-೧೯೬೯

ಹುಬ್ಬಳ್ಳಿ : ಅಧಿಕ ಆಷಾಢ ಮಾಸ ನಿಮಿತ್ತ ಪಂಡಿತ ಶಂಕರ ಶಾಸ್ತ್ರಿ ಮುಳಗುಂದ ಇವರ ಪುರಾಣ ಸ್ಥಳ - ದಾಜೀಬಾನಪೇಟೆಯ ಗವಳಿಗಲ್ಲಿ ರಾಮಮಂದಿರ ವೇಳೆ : ಪ್ರತಿದಿನ ಸಾಯಂಕಾಲ ೫ ರಿಂದ ೬.

ಹುಬ್ಬಳ್ಳಿ - ಕನ್ನಡಿಗರ ಹಿತರಕ್ಷಕ ಸಂಘದ ಸಭೆ ಸ್ಥಳ - ಗುರುಬಸವ ಮಂಟಪ ವೇಳೆ · ಸಂಜೆ ೬-೩೦ ಗಂಟೆ

ಹುಬ್ಬಳ್ಳಿ - ಸರ್ವಶ್ರೀ ಕೌಸಾಳಿ. ವಾಲಿ, ಶೆಟ್ಟರ, ಗುಡಿ ಅವರಿಗೆ ಸತ್ಕಾರ ತಂಬದ ಓಣಿ, ಐದುಮನಿಸಾಲ ನಾಗರಿಕರಿಂದ ಶ್ರೀ ಮಡಿವಾಳ ಶಿವಾಚಾರ್ಯ ಹನ್ನೆರಡುಮಠ ಇವರ ಸನ್ನಿಧಿಯಲ್ಲಿ ಸ್ಥಳ - ಹನ್ನೆರಡುಮಠ ವೇಳೆ- ಸಂಜೆ ೬-೦ ಗಂಟೆ.

ಹುಬ್ಬಳ್ಳಿ- ಆಂಧ್ರ ಧರ್ಮ ಸಮಾಜದ ವಾರ್ಷಿಕೋತ್ಸವ ಮತ್ತು ಕಟ್ಟಡದ ಅಡಿಗಲ್ಲು ಸಮಾರಂಭ ಶ್ರೀ ಆರ್. ಜಿ. ವಾಲಿ ಎಮ್ ... ಅವರಿಂದ ಅಲ್ಲದೇ ಸರ್ವಶ್ರೀ ... ಎಮ್. ಆರ್ ಶೆಟ್ಟರ ಎಸ್. ... ಬಿ. ಉಳ್ಳಾಗಡ್ಡಿಮಠ, ... ಅವರಿಗೆ ಸತ್ಕಾರ ಅಧ್ಯ ... ಪ್ಪ ಸ್ಥಳ ಮೌಲಾಅಲಿ ... -೦ ಗಂಟೆ

... ನಗರದ ಭಗಿನಿ ಮಂಡಳ ... ನಾರಾಯಣಾಚಾರ್ಯರಿಂದ ... ವಿಜಯನಗರ ಸೊಸೈಟಿ ಕಟ್ಟಡ ವೇಳೆ ಸಂಜೆ ೪—೩೦ ಗಂಟೆ.

### ಭಾರತ ಪ್ರವಚನ

ಹುಬ್ಬಳ್ಳಿ ೧೭ - ಪಂ. ಶೇಷಾಚಾರ್ಯ ಕೌಲಗಿಯವರು ನಾಳೆ ತಾ ೧೮ ರಿಂದ ...





ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಆರನೆಯ ಪುಷ್ಪವು.

ಮುಂಬಯಿ ಇಲಾಖೆಯ ವಿದ್ಯಾಖಾತೆಯ ಮಾನ್ಯತೆಯನ್ನು ಪಡೆದ

# ಕರ್ನಾಟಕ
# ಕವಿತಾ ಕುಸುಮ ಮಂಜರಿ

(ದ್ವಿತೀಯ ಗುಚ್ಛ)

ಇದನ್ನು

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ನಾರಾಯಣ ವೆಂಕಟೇಶ ಕುರಡಿ**

ಇವರು ರಚಿಸಿದರು.

---

೧೯೪೦




ಬೆಲೆ ೫ ಆಣೆಗಳು

# ಪ್ರಸ್ತಾವನೆ

ಮೊದಲನೆಯ ಗುಚ್ಛದ ಪ್ರಸ್ತಾವನೆಯನ್ನು ಓದಿದ ಮಹನೀಯರಿಗೆ ನಮ್ಮ ಈ ಖಂಡಕಾವ್ಯದ ಧೋರಣೆಯನ್ನು ಪುನಃ ಹೇಳುವ ಕಾರಣವುಳಿಯದು.

ಈ ಭಾಗದ ಮೊದಲನೆಯ ಕವಿತೆಯಾದ 'ಕರ್ನಾಟಕ ದೇಶಮಾತೆ' ಎಂಬುದನ್ನು ನಮ್ಮ ಕನ್ನಡ ಶಾಲೆಗಳಲ್ಲಿ ಪ್ರತಿನಿತ್ಯ ಮಾಡುವ ಪ್ರಾರ್ಥನೆಯ ಪದ್ಯದಂತೆ ಉಪಯೋಗಿಸುತ್ತಿರುವದು ಶಿಕ್ಷಕ ವರ್ಗವು ಅರಿಯದ ಮಾತಲ್ಲ. ಮದ್ರಾಸ ವಿಶ್ವವಿದ್ಯಾನಿಲಯದವರು ೧೨ ನೆಯ ಕವಿತೆ 'ಮಾತೃಭೂಮಿ' ಯನ್ನು S. S. L. C. ಪರೀಕ್ಷೆಯ ಪಾಠಪುಸ್ತಕದಲ್ಲಿ (೧೯೨೮) ಆರಿಸಿ ಸೇರಿಸಿ ಆ ಕವಿತೆಯ ಘನತೆಯನ್ನು ಪ್ರಕಟಿಸಿರುವರು. ಎರಡನೆಯ ಭಾಗದಲ್ಲಿ ಕರ್ನಾಟಕದಲ್ಲಿ ಆಗಿ ಹೋದ ೨೭ ಜನ ಮಹಾ ಕವಿಗಳ ಸ್ಥಳ-ಕಾಲ-ಕುಲಗಳೂ ಅವರ ಮಹಾ ಕಾವ್ಯಗಳೂ ಸಮಾವೇಶವಾಗಿವೆ. ಈ ಮೂರೂ ಕವಿತೆಗಳನ್ನು ಬಾಲಕರು ಪಾಠಮಾಡಿಟ್ಟುಕೊಂಡರೆ ಮುಂದೆ ಅವರಿಗೆ ತುಂಬ ಪ್ರಯೋಜನವಾಗಬಹುದೆಂದು ಆಶಿಸಲಾಗಿದೆ.

---

## ಎರಡನೆಯ ಮುದ್ರಣ

ಮೊದಲನೆಯ ಮುದ್ರಣವಾದ ಹದಿನೆಂಟು ವರುಷಗಳ ತರುವಾಯ ಈ ಎರಡನೆಯ ಮುದ್ರಣವು ಬಯಲಿಗೆ ಬರುತ್ತಿದೆ. ಶಾಲೆಯ ವಿದ್ಯಾರ್ಥಿಗಳನ್ನು ಬಿಟ್ಟರೆ ಮಿಕ್ಕವರಲ್ಲಿ ಕವಿತಾ ಪುಸ್ತಕಗಳ ವಾಚನದ ಅಭಿರುಚಿಯುಳ್ಳವರೇ ಇಲ್ಲವೆಂದೊ ತೀರ ಕಡಿಮೆಯೆಂದೊ ಹೇಳುವ ದುಸ್ಥಿತಿ ಇಂದಿನ ಕನ್ನಡ ಕವಿಗಳ ಪಾಲಿನದು. ಈ ಪುಸ್ತಕವನ್ನು ವಿಮರ್ಶೆ ಮಾಡಿದ ಮಹನೀಯರಲ್ಲೊಬ್ಬರೂ ಬೆಂಗಳೂರಿನ ವಿಶ್ವಕರ್ನಾಟಕದ ಸಂಪಾದಕರೂ ಆದ ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರ ಹೇಳಿಕೆಯೊಂದನ್ನು ಇಲ್ಲಿ ಕೊಡುವುದರಿಂದ ಈ ಪುಸ್ತಕದ ಯೋಗ್ಯತೆಯು ಓದುಗರ ನಿದರ್ಶನಕ್ಕೆ ಬರಬಹುದೆಂದು ಕೋರಿದೆ.

"ಇಂಗ್ಲೀಷು ಮಾರ್ಗಗಳ ಅನುಸರಣದಿಂದಲೂ, ಕವಿ ರವೀಂದ್ರರ ಉತ್ಕೃಷ್ಟವಾದ ಕಾವ್ಯಗಳ ಪಠನದಿಂದಲೂ ಕನ್ನಡಿಗರನೇಕರಲ್ಲಿ ಹೊಸ ಚೈತನ್ಯವು ಹುಟ್ಟಿರುವುದು. ಭಾಷಾಸೇವೆಯನ್ನು ಮಾಡುವ ಸದುದ್ದೇಶದಿಂದ ಆಧುನಿಕರನೇಕರು ಗ್ರಂಥರಚನೆಗೆ ಮೊದಲಿಟ್ಟಿರುವರು. ಅಂಥವರಲ್ಲಿ ಶ್ರೀ. ಕುರಡಿಯವ

ರೊಬ್ಬರು. ಇವರ ಕವಿತಾಶಕ್ತಿಯು ಉಚ್ಚ ವರ್ಗಕ್ಕೆ ಸೇರಿದುದೇ ಸರಿ. ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಮನಕೊಡು ವರೆಂದೂ, ದೀರ್ಘ ಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ, ಹಳಗನ್ನಡಕ್ಕಿಂತ ನಡುಗನ್ನಡವನ್ನು ಹೆಚ್ಚಾಗಿ ಪ್ರಯೋಗಿಸುವರೆಂದೂ, ಮ॥ ಹ. ನಾರಾಯಣರಾಯರು ತಮ್ಮ 'ಕನ್ನಡ ಕವಿತೆಯ ಭವಿತವ್ಯ'ವೆಂಬ ಲೇಖನದಲ್ಲಿ ಸೂಚಿಸಿದ್ದರು. ನಮ್ಮ ಮುಂದಿರುವ ಕವಿತಾ ಕುಸುಮ ಮಂಜರಿಯಲ್ಲಿ ಮೇಲಿನ ಸೂಚನೆಗಳೆಲ್ಲವೂ ಕಾಣಬರುತ್ತಲಿವೆ. ದೇವರು, ಭಕ್ತಿ, ಭೂತದಯೆ ಎಂಬ ವಿಚಾರಗಳ ಮೇಲೆ ಮಾತ್ರವೇ ಅಲ್ಲದೆ ಕವಿ ರವೀಂದ್ರರ ಕಾವ್ಯಗಳಿಂದಲೂ ಕೆಲವು ಭಾವಗಳನ್ನು ಸಂಗ್ರಹಿಸಿರುವರು. ಕನ್ನಡಿಗರೆಲ್ಲರೂ ಇವರ ಕವಿತಾಮೃತವನ್ನು ಸವಿಯುವರೆಂದು ನಂಬುತ್ತೇವೆ."

"ಶ್ರೀಯುತ ಕುರಡಿಯವರು ಕನ್ನಡಿಗರಿಗೆ ಹೊಸಬರಲ್ಲ. ಕನ್ನಡ ನಾಡಿನಲ್ಲಿ ಈಗ ಚೆಲುವೂ ರಸಭರಿತವೂ ಮಂಜುಳವೂ ಸರಳವೂ ಆದ ಷಟ್ಪದಿಗಳನ್ನು ಬರೆಯಲು ಶಕ್ತರಾದ ಕವಿಗಳೆಂದರೆ ಶ್ರೀಯುತ ಕುರಡಿಯವರೊಬ್ಬರೇ. ಈ ಮಾತಿನಲ್ಲಿ ಸಂಶಯವಿಲ್ಲ." (ದೇಶೀಯ ವಿದ್ಯಾಶಾಲಾ ಪತ್ರಿಕೆಯ ಎರಡನೆಯ ಸಂಪುಟ)

ನಮ್ಮ ಕವಿತಾ ಕುಸುಮ ಮಂಜರಿಯ ಎರಡೂ ಭಾಗಗಳನ್ನು ಮುಂಬಯಿಯ ವಿಶ್ವವಿದ್ಯಾನಿಲಯದವರು ಒಮ್ಮೆ ಎಮ್. ಏ. ಪರೀಕ್ಷೆಯ ವಿದ್ಯಾರ್ಥಿಗಳ ಅಭ್ಯಾಸಕ್ಕಾಗಿ ಆರಿಸಿದ್ದರೆಂದು ಹೇಳುವುದರಿಂದ ಮೇಲಿನ ವಾಕ್ಯಗಳ—ಶ್ರೀ. ತಿರುಮಲೆ ತಾತಾಚಾರ್ಯ ಶರ್ಮರು ಈ ಪುಸ್ತಕವನ್ನು ವಿಮರ್ಶೆ ಮಾಡುವಾಗ ಪ್ರಕಟಿಸಿದ ಅಭಿಪ್ರಾಯಗಳ—ಸತ್ಯತೆಯನ್ನು ವ್ಯಕ್ತಪಡಿಸಿದಂತಾಗ ಬಹುದೆಂದು ನಮ್ಮ ಭಾವನೆ.

ನಮ್ಮ ಕರ್ನಾಟಕದೊಳಗಿನ ಬೇರೆ ಬೇರೆ ಸ್ಕೂಲ್‌ಬೋರ್ಡುಗಳು ಈ ಎರಡೂ ಭಾಗಗಳನ್ನು ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳ ಹೆಚ್ಚಿನ ವಾಚನಕ್ಕೆ ನಿಯ ಮಿಸಿದ್ದರಿಂದಲೇ ನಮಗೆ ಈ ಎರಡನೆಯ ಮುದ್ರಣದ ಸುಯೋಗವು ಬಂದಿರು ವದರಿಂದ ಆ ಎಲ್ಲ ಮಹನೀಯರಿಗೆ ನಮ್ಮ ಅಂತಃಕರಣಪೂರ್ವಕ ವಂದನೆಗಳು ಸಲ್ಲಬೇಕಾಗಿದೆ.

ಧಾರವಾಡ }
೧೯೪೦ }

ತಮ್ಮೆಲ್ಲರ ವಿಧೇಯ,

**ನಾರಾಯಣ**

# ೧. ಕರ್ನಾಟಕ ದೇಶಮಾತೆ

"ಆರುಹಿತವರು ನಿನಗೆ ಈ ಮೂವರೊಳಗೆ—" ಎಂಬಂತೆ.

**ಭೋ**ಮಾತೆ ಕರ್ನಾಟ ಭೂಮಾತೆ ಏನುತೆ।
ಆ ಮಹಾ ಋಷಿನಮಿತೆ ನಮಿಸುವೆನು ಪೊರೆಯಾ ॥ ಪಲ್ಲ ॥
**ಕಾ**ವೇರಿ ದಕ್ಷಿಣದೊಳುತ್ತರದ ದಿಶೆಗೆ ಗೋ–।
ದಾವರಿಯು ನಿನ್ನ ಗಡಿಯೆನಿಸಿತೊಮ್ಮೆ ॥
ಭೋ ವಸುಂಧರೆ ಪೂರ್ವದಾ ನಿನ್ನ ವೈಭವವ।
ನಾವ ಕವಿ ಬಣ್ಣಿಸಲು ಸಾಧ್ಯವಮ್ಮಾ! ॥ ೧ ॥ ಭೋಮಾತೆ—
**ಹ**ಳೆಬೀಡು ಬಾದಾಮಿ ಬನವಾಸಿ ವಿಜಯಪುರ।
ಮಳಖೇಡ ಕಲ್ಯಾಣ—ನಗರಗಳಲಿ ॥
ಕಲಿಸಾರ್ವಭೌಮ ನೃಪರಿಂದೆಸೆದು ಹೆಸರಾದ।
ಹಳೆಯ ರಾಜ್ಯಗಳಿಂದೆ ಮೆರೆದೆಯಮ್ಮಾ! ॥ ॥ ೨ ॥ ಭೋಮಾತೆ—
**ಚಾ**ಲುಕ್ಯ ೧ ಪುಲಿಕೇಶಿ ೨ ಗೋವಿಂದ ೩ ನೃಪತುಂಗ।
೪ ತೈಲನೃಪ ೫ ವಿಕ್ರಮಾದಿತ್ಯ ೬ ಬುಕ್ಕ ॥

---

(೧) ಬಾದಾಮಿಯ ಚಾಲುಕ್ಯಮನೆತನದ ಶ್ರೀ ಸತ್ಯಾಶ್ರಯ ಪುಲಿಕೇಶಿ ಮಹಾರಾಜನು (೭ನೆಯ ಶತಕ).

(೨) ಮಳಖೇಡದ ರಾಷ್ಟ್ರಕೂಟ ಚಕ್ರವರ್ತಿಯಾದ ಮೂರನೆಯ ಗೋವಿಂದನು (೯ನೆಯ ಶತಕ).

(೩) ಕವಿಶ್ರೇಷ್ಠನೂ ಕರ್ನಾಟಕಕ್ಕೆ ಅಲಂಕಾರ ಸ್ವರೂಪನೂ ಆದ ರಾಷ್ಟ್ರಕೂಟ ಮಹಾರಾಜನು (೯ನೆಯ ಶತಕ).

(೪) ಕಲ್ಯಾಣದ ಚಾಲುಕ್ಯ ಮನೆತನದ ಮೂಲಪುರುಷನು (೧೦ನೆಯ ಶತಕ).

(೫) ಕಲ್ಯಾಣನಗರವನ್ನು ಸ್ಥಾಪಿಸಿದ ಸೋಮೇಶ್ವರ ಮಹಾರಾಜನ ಎರಡನೆಯ ಮಗನಾದ ನೃಪೋತ್ತಮನು (೧೧ನೆಯ ಶತಕ).

(೬) ವಿಜಯನಗರದ ರಾಜಮನೆತನದಲ್ಲಿ ಪ್ರಬಲನಾಗಿ ಕೋಟೆಕೊತ್ತಳಗಳನ್ನು ಕಟ್ಟಿಸಿದ ಮೊದಲನೆಯ ರಾಜನು (೧೪ನೆಯ ಶತಕ).

ಮೇಲಾದ ಕಲಿ ೭ ಕೃಷ್ಣರಾಯರೆಂಬಾ ಸತ್ಪ।
ಶಾಲಿ ನೃಪವರರಿಂಗೆ ಜನ್ಮದಾತೆ ॥ ೩ ॥ ಭೋಮಾತೆ—

೮ ಅಕ್ಕದೇವಿಗೆ ವೀರ ೯ ವೈರಾಳದೇವಿಗೆ ।
೧೦ ಬುಕ್ಕರಾಯನ ಸೊಸೆಗೆ ೧೧ ವಿದುಷಿಯರಿಗೆ ॥
ಲೆಕ್ಕವಿಲ್ಲದ ಭವ್ಯಗುಡಿಗಳನು ವಿರಚಿಸಿದ ।
ಜಕ್ಕಣಾಚಾರ್ಯನಿಗೆ ಜನ್ಮದಾತೆ ॥ ೪ ॥ ಭೋಮಾತೆ—

ಅದ್ವೈತ ಮತವಾದಿ ಕೇರಳದ ಶಂಕರನ ।
ಸುದ್ವೈತ ಮತವಾದಿ ಮಧ್ವಮುನಿಯ— ॥
ಸುದ್ವಿಜನ ರಾಮಾನುಜನ ಕಾರ್ಯದಭಿಮಾನಿ ।
ಸದ್ವಿಬುಧ ೧೨ ಭಾಸ್ಕರನ ಜನ್ಮದಾತೆ ॥ ೫ ॥ ಭೋಮಾತೆ—

ಬಿಜ್ಜಿಯಲಿ ಹೆಸರಾದ ಮಾಧವನ ಸಾಯನನ ।
ಬಿಜ್ಜಳನ ಕಾಲದಾ ಬಸವೇಶನ ॥
ಸಜ್ಜನ ಪುರಂದರನ ಕನಕದಾಸನ ಜನನಿ ।
ಮಜ್ಜನಕ ಜನನಿಯರ ಜನ್ಮದಾತೆ ॥ ೬ ॥ ಭೋಮಾತೆ—

---

(೭) ವಿಜಯನಗರದ 'ನರಸ' ಮನೆತನದ ಪ್ರತಾಪಶಾಲಿಯಾದ ಕೃಷ್ಣದೇವರಾಜ ಮಹಾರಾಜನು (೧೬ನೆಯ ಶತಕ)

(೮) ಮೂರನೆಯ ಜಯಸಿಂಹನ ತಂಗಿಯಾದ "ರಣಭೈರವಿ" ಯೆಂದು ಹೆಸರು ಪಡೆದ ಮಹಾಮಹಿಮಳು.

(೯) ಬನವಾಸಿಯಲ್ಲಿ "ಪಿರಿಯರಸಿ" ಯೆಂದು ಹೆಸರು ಪಡೆದು ಆಳಿದ ಚಾಲುಕ್ಯ ಮನೆತನದ ರಾಣಿ.

(೧೦) ವೀರಕಂಪಣರಾಯಚರಿತವೆಂಬ ಸಂಸ್ಕೃತ ಕಾವ್ಯಕರ್ತ್ರಿ ಗಂಗಾದೇವಿ.

(೧೧) ಕಂತಿ, ಹೊನ್ನಮ್ಮ, ನೀಲಮ್ಮ, ಗಿರಿಯಮ್ಮ, ಮೊದಲಾದ ವಿದುಷಿಯರು.

(೧೨) ಜ್ಯೋತಿಷ-ಗಣಿತಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತನಾದ ಶ್ರೀ ಭಾಸ್ಕರಾಚಾರ್ಯನು.

ಟಿಪ್ಪಣಿ:—ಈ ಪದ್ಯಗಳು ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಶಾಲೆಯ ಕೆಲಸವು ಪ್ರಾರಂಭವಾಗುವದಕ್ಕಿಂತ ಮೊದಲು ವಿದ್ಯಾರ್ಥಿಗಳು ಮಾಡುವ ಪ್ರಾರ್ಥನೆಗಾಗಿ ಉಪಯೋಗಿಸಲ್ಪಡುತ್ತಿವೆ.

"ಅದ್ವೈತಮತವಾದಿ......" ಈ ಕವಿತೆಯಲ್ಲಿ ಬಂದಿರುವ ಶಂಕರಾಚಾರ್ಯ ಮಾಧವಾಚಾರ್ಯ ರಾಮಾನುಜಾಚಾರ್ಯರು ಕರ್ನಾಟಕದೇಶದಲ್ಲಿ ಹುಟ್ಟಿದವರಲ್ಲ. ಅವರು ತಾವು ಕೈಕೊಂಡಿದ್ದ ಧರ್ಮಪ್ರಸಾರದ ಕಾರ್ಯವನ್ನು ಪ್ರಾಮುಖ್ಯವಾಗಿ ಕರ್ನಾಟಕದಲ್ಲಿಯೇ ನಡೆಯಿಸಿದರು. ಆದ್ದರಿಂದ ಕರ್ನಾಟಕ ಮಾತೆಯು ಅವರ ಕಾರ್ಯದಲ್ಲಿ ಅಭಿಮಾನವನ್ನು ತಳೆಯಬೇಕಾಗಿದೆ; ಇಷ್ಟೆ.

[ಈ ಕವಿತೆಯಲ್ಲಿ ಬಂದಿರುವ ಐತಿಹಾಸಿಕ ಸ್ಥಳಗಳ ಮತ್ತು ವ್ಯಕ್ತಿಗಳ ಪರಿಚಯವನ್ನು ಶಿಕ್ಷಕರು ತಮ್ಮ ವಿದ್ಯಾರ್ಥಿಗಳಿಗೆ ಮೊದಲು ಮಾಡಿಕೊಟ್ಟಿರಬೇಕು.]

## ಕವಿರವೀಂದ್ರರ ಒಂದು ಬಿಡಿ ಕವಿತೆ.

ಇರದೆನ್ನ ಲಲಿತ ಕವಿತಾ ವನಿತೆಗಾಭರಣ।
ವಿರದದಸಳಿಗುಡುತೊಡುಗೆ ಸಿಂಗಾರದಭಿಮಾನ।
ಬರಿಯ ಬಾಹ್ಯದ ರಚನೆಯಿಂವುದೇ ಸದ್ಗುಣವ
ಪದ ಪದಾರ್ಥಾಭಿರತಿಯ ॥

ಹೊರಗಿರುವಲಂಕಾರ ವಡ್ಡಬಹುದೈಕ್ಯತೆಗೆ।
ವರ ಕವಿತೆ ವಿದುಸರದೊಳಂತರಂಗದೊಳೊರೆವ।
ಸರಸ ಸಲ್ಲಾಪದಿಂಪಂ ಕಳೆದು ಮೆರೆವುದಾಡಂಬರದೊಳದರ ರವವು ॥

ಕವಿಕುಲಕೆ ಗುರುವೆನಿಪ ನಿನ್ನ ದರುಶನದಿಂದ।
ಕವಿಯೆಂಬಹಂಕಾರವಳಿದುದೈ ಗೋವಿಂದ।
ಸವಿನಯದೊಳೆರಗಿ ತವ ಪಾದಾರವಿಂದಕಾಂ ಬೇಡುವೆಂ
ಕರುಣಿಸೊಲಿದು ॥

ಭುವನದಲಿ ಸರಳ ಸಂಜೀವನವೆ ಸಾಕೆನಗೆ।
ತವಕರದ ಕೊಳಲಿನಂದದೊಳೆನ್ನ ಜೀವನವ।
ಸುವಿಚಾರ ಸುಸ್ವನದೆ ರಂಜಿಸುವ ಸುಕವಿ ನೀನಲ್ಲದಾರುಂಟು
ಹರಿಯೇ ॥

## ೨. ಕರ್ನಾಟಕ-ಕವಿ-ಮಂಡಲ

ಕರ್ಣಾಟಸಾಹಿತ್ಯಸಾಗರದ ಮೇರೆಯಂ ।
ಕಣ್ಣಾರೆ ಕಾಣಲಾರೆವು ನಮಗೆ ತಿಳಿದಿರುವ ।
ಕರ್ಣಾಟ ಕವಿಕುಲೋತ್ತಂಸರಂ ಕ್ರಮದಿಂದೆ ಭಕ್ತಿಯಿಂ ವಂದಿಸುವೆನು ॥
ಕರ್ಣಾಟ ಕಾವ್ಯಂಗಳಲ್ಲೆಮಗೆ ದೊರೆದಿರುವ ।
ಕರ್ಣಾಟ **ಕವಿರಾಜಮಾರ್ಗ**ವೇ ಮೊದಲೆನಿಸಿ ।
ಕರ್ಣಾಟ ಕವಿರಾಜ **ನೃಪತುಂಗ**ಭೂಪಾನುಮತವಾಯ್ತು ನಮಿಪೆನವನ
॥ ೧ ॥

ಲಲಿತವಹ ಪುಲಿಗೆರೆಯ ತಿರುಳ ಕನ್ನಡದಲ್ಲಿ ।
ಅಲಸದೆಯೆ **ಭಾರತಾದಿಪುರಾಣ**ಗಳನು ಜನ ।
ರೊಲಿದು ತಲೆದೂಗುವಂದದಿ ಬರೆದ ಕವಿ**ಯಾದಿಪಂಪ**ನಂ ವಂದಿಸುವೆನು ॥
ಲಲಿತ **ಶಾಂತಿಪುರಾಣ** ವರ **ಜಿನಾಕ್ಷರಮಾಲೆ** ।
ಗಳ ರಚಿಸಿ **ಭುವನೈಕರಾಮಾಭ್ಯುದಯ**ವ ಬುಧ- ।
ರೊಲಿಯಲುಸಿರಿದ 'ಉಭಯ ಕವಿಚಕ್ರವರ್ತಿ'ಯಂ **ಪೊನ್ನನಂ**
ವಂದಿಸುವೆನು ॥ ೨ ॥

ಸನ್ನುತ **ಗದಾಯುದ್ಧವನಜಿತಪುರಾಣ**ವನು ।
ಕನ್ನಡದಿ ಬರೆದಿರುವ ಮುದುವೊಳಲ ಬಳೆಗಾರ ।
**ರನ್ನ**ನಂ ವಂದಿಸುವೆನೊಂಬತ್ತುವರೆ ನೂರರಾದಿಯಲಿ (೯೪೯) ಜನ್ಮಿಸಿರುವ ॥
ಕನ್ನಡದ ಕವಿಗಳಲಿ ರನ್ನದಂತೆಸೆಯುವರು ।
ರನ್ನ ಪೊನ್ನರು ವೆಂಗಿಪಳುವಿನಾದಿಯ ಪಂಪ ।
ಸನ್ನುತ ಸುಕೀರ್ತಿ ಪಂಪಂ ಪಿರಿಯನುಳಿದರ್ಗೆಯರ್ಧಶತಮಾನದಿಂದ ॥ ೩ ॥

ಕನ್ನಡದೆ **ಕಾದಂಬರಿ**ಯ ಬರೆದ ಕಬ್ಬಿಗನ ।
ಕನ್ನಡದ **ಛಂದೋಂಬುಧಿ**ಯ ಬರೆದ ಜಗವೆಲ್ಲ ।
ಮನ್ನಿಸುವ ಮೊದಲನೆಯ ವೆಂಗಿಪಳುವಿನ **ನಾಗವರ್ಮ**ನಂ ವಂದಿಸುವೆನು ॥

ತನ್ನ ಹೆಸರಿನ **ಪುರಾಣ**ಮಂ ಗದ್ಯದೊಳ್ ಬರೆದು।
ಕನ್ನಡದ ಹತ್ತನೆಯ ಶತಮಾನದಂದಮಂ।
ರನ್ನಗನ್ನಡಿಯಂತೆ ಬಿಂಬಿಸಿದ **ಚಾವುಂಡರಾಯ**ನಂ ವಂದಿಸುವೆನು ॥ ೪॥
**ಇಂ**ಪಾದ ಶೈಲಿಯಲಿ **ಪಂಪರಾಮಾಯಣ**ವ।
ಸೊಂಪಾದ **ಮಲ್ಲಿನಾಥಪುರಾಣ**ಮಂ ಬರೆದ।
**ಪಂಪ**ನೆಂಬುಪನಾಮಮಂ ತಳೆದ ವಿಜಯಪುರವಾಸಿಯಂ ವಂದಿಸುವೆನು ॥
ಪಂಪನೃಪತುಂಗರುಂ ರನ್ನನುಂ ಪೊನ್ನ ನವ-।
ಪಂಪರುಂ ಕವಿನಾಗವರ್ಮನುಂ ಜೈನರ್ಕೈ।
ಇಂಪು ಸೊಂಪೆನಿಪ ಸುಸ್ಥಿತಿಯ ಕನ್ನಡಕಿತ್ತ ಕವಿಕುಲೋತ್ತಂಸರಿವರ್ಕೈ ॥೫॥
**ಕ**ನ್ನಡದೆ ಗಣಿತಶಾಸ್ತ್ರವ ಸಕಲಪಂಡಿತರು।
ಮನ್ನಿಪಂತೊರೆದ **ರಾಜಾದಿತ್ಯ** ಕವಿವರಂ।
ಹನ್ನೆರಡುನೂರರಿಪ್ಪತ್ತರೊಳ್ ಕೊಂಡಿಮಂಡಲದೊಳಗೆ ಬಾಳ್ದನಲ್ತೇ ॥
ಸನ್ನುತಂ **ನಯಸೇನ**ನೊರೆದು **ಧರ್ಮಾಮೃತ**ವ।
ಹನ್ನೆರಡುನೂರ ಹನ್ನೆರಡರಲಿ ಬಾಳಿದಂ।
ಕನ್ನಡದ ನಡುನಾಡ ಮುಳಗುಂದದಲಿ ನಮಿಪೆನೀ ಜೈನಕವಿಗಳನ್ನು ॥ ೬ ॥
**ಸು**ರಸಮಹ ಜೈನಶೈಲಿಯ **ಪಂಚತಂತ್ರ**ಮಂ।
ಒರೆದು ಜೈನರ ಕಾಲದಲಿ ಹೆಸರುಗೊಂಡಿರುವ।
ವರ ಸಯ್ಯಡಿಯ ವಾಸಿಯಂ ದ್ವಿಜಕುಲದ **ದುರ್ಗಸಿಂಹ**ನಂ ವಂದಿಸುವೆನು ॥
ಸರಸ ಲಕ್ಷಣಶಾಸ್ತ್ರ **ಕಾವ್ಯಾವಲೋಕನ**ವ।
ವರಶಬ್ದಶಾಸ್ತ್ರ **ಭಾಷಾಭೂಷಣ**ವ ಒರೆದ।
ಎರಡನೆಯ **ನಾಗವರ್ಮ**ನಂ **ವಸ್ತುಕೋಶ**ದ ಕರ್ತನಂ ವಂದಿಸುವೆನು॥೭॥
**ವೀ**ರಶೈವಮತಪ್ರಸಾರಕರ ಮುಂದಾಳು।
ವೀರಬಿಜ್ಜಳರಾಜನಾಶ್ರಯದ **ಬಸವ**ಗುರು।
ವೀರಶೈವಮತಪ್ರಸಾರಕ ಸುವಚನ ರಚನಾ ಚತುರನೆನಿಸಿ ಮೆರೆದು ॥
ನೂರಾರು ವಚನಗಳ ರಚಿಸಲು **ಚೆನ್ನಬಸವ**ಗುರು।
ಮೂರು ವಚನಗಳನ್ನು ರಚಿಸಿದನು ಹನ್ನೊಂದು।
ನೂರರರುವತ್ತರಲಿ ಬಾಳಿದಾ ಕಲ್ಯಾಣವಾಸಿಗಳ ವಂದಿಸುವೆನು ॥ ೮ ॥

**ಹರಿಹರಂ ಶಿವಗಣದ ರಗಳೆ ಪಂಪಾಶತಕ** ।
ಸರಸ **ಗಿರಿಜಾಕಲ್ಯಾಣ** ಕಾವ್ಯಗಳ ಬರೆದು, ।
ವರ ವೀರಶೈವಕವಿ, ಜಾಮಾತ **ರಾಘವಾಂಕಂ** ತನ್ನ ಶಿಷ್ಯನೆನಿಸಿ ॥
ಸರಚರಿತೆ ವರ **ಹರಿಶ್ಚಂದ್ರ** ಕಾವ್ಯವನೊರೆಯ ।
ಉರೆಜರೆದು ಹಂಪೆಯೊಳ್ **ಸಿದ್ಧರಾಮಪುರಾಣ** ।
ವರಕಾವ್ಯ **ಸೋಮನಾಥಚರಿತ್ರೆ**ಗಳ ಬರೆಸಿದಂ ನಯದೆ ನಮಿಪೆನವರ ॥೯॥

**ಹ**ನ್ನೊಂದುನೂರೈದು (೧೧೦೫) ನಾಗಚಂದ್ರನಕಾಲ ।
ಹನ್ನೊಂದುನೂರನಾಲ್ವತ್ತೈದು (೧೧೪೫) ದುರ್ಗನದು ।
ಹನ್ನೊಂದುನೂರಕಿನ್ನೂರ್ ಕಡಿಮೆಗಿನ್ನುಮೆಪ್ಪತ್ತೆಂಟು ಕೂಡಿಸಿದರೆ ॥
ಹನ್ನೆರಡು ಮತ್ತೆ ಕೂಡಲ್ ಕ್ರಮದೆ ಬರುತಿಹುದು ।(೯೭೮; ೯೮೦)
ಸನ್ನುತರ ಚಾವುಂಡನಾಗವರ್ಮರಕಾಲ ।
ಹನ್ನೊಂದುನೂರರುವತ್ತುಮೇಲೈದಾಗೆ.(೧೧೬೫) ರಾಘವಾಂಕನ
ಕಾಲವು ॥೧೦॥

ಆಮಹಾಶೃಂಗಾರ ಕಾವ್ಯ **ಲೀಲಾವತಿ**ಯ ।
**ನೇಮಿನಾಥಪುರಾಣ**ವನು ರಚಿಸಿ ಹೆಸರಾದ ।
**ನೇಮಿಚಂದ್ರಂಗೆ**ರಗುವೆನು ಮೊತ್ತಮೊದಲು ಕಾದಂಬರಿಯ
(ಕಲ್ಪಿತಕಥೆಯ) ಬರೆದವಂಗೆ ॥
ನೇಮಿಚಂದ್ರನು ನಾಗವರ್ಮನುಂ ಜೈನರೈ ।
ನೇಮಿಚಂದ್ರನು ಕಿರಿಯನೈದುವರ್ಷಂಗಳಿಂ !
ಸೋಮನಾಥಚರಿತ್ರಕರ್ತಂಗೆ ಕವಿನಾಗಿದೇವಂಗೆ ಹರಿಹರಂಗೆ ॥೧೧॥

ಜಗವೆಲ್ಲ ತಲೆದೂಗುವಂತೆ **ರಸಕಲಿಕೆ**ಯಂ ।
ಜಗದಧಿಪಕೃಷ್ಣಚಾರಿತ್ರದಾಧಾರದಿಂ ।
**ಜಗನ್ನಾಥವಿಜಯ**ವ ಬರೆದನಂ ದ್ವಿಜ **ರುದ್ರಭಟ್ಟ**ನಂ ವಂದಿಸುವೆನು ॥
ಅಗಣಿತದಶಬ್ದಶಾಸ್ತ್ರದ ರೂಪವನು ಕನ್ನ ।
ಡಿಗರಿಂಗೆ **ಶಬ್ದಮಣಿದರ್ಪಣ**ದಿ ದರ್ಪಣದಿ ।
ಸುಗಮಮಪ್ಪಂತೊರೆದ ಜೈನನಂ ವರ**ಕೇಶಿರಾಜ**ನಂ ವಂದಿಸುವೆನು ॥೧೨॥

**ಕ**ನ್ನಡಕೆ ಸಕ್ಕದನ ಬೆರಸದೆಯೆ ಬರಿಯಚ್ಚ ।
ಗನ್ನಡದಿ **ಕಬ್ಬಿಗರ ಕಾವನುಂ** ಬರೆದೆಲ್ಲ ।
ಕನ್ನಡದ ಕಬ್ಬಿಗರ ಕಾಪನೆನಿಸಿ**ಪಾಂಡಯ್ಯ** ಜೈನ ಕವಿವರನ ನಮಿಪೆಂ ॥
ಹನ್ನೆರಡು ನೂರರರುವತ್ತರಲಿ ಕೇಶವಂ ।
ಹನ್ನೊಂದು ನೂರರೆಂಬತ್ತರಲಿ ರುದ್ರನುಂ ।
ಹನ್ನೆರಡು ನೂರಮೂವತ್ತೈದರೊಳಗೆ ಆಂಡಯ್ಯನುಂ ಬಾಳ್ದರಲ್ತೆ ॥ ೧೩ ॥

**ಗ**ದುಗಿನಲಿ ವೀರನಾರಾಯಣನ ಭಕ್ತನೆಂ ।
ಬುದ ತೋರ್ಪ **ಭಾರತ**ವ ತಿರುಳ ಕನ್ನಡದಲ್ಲಿ ।
ಬುಧರೊಪ್ಪೆ ಬರೆದ ವರಕವಿ **ಕುಮಾರವ್ಯಾಸ**ನಂ ನಯದಿ ವಂದಿಸುವೆನು ॥
ಮೃದು ಮಧುರ ಶೈಲಿಯಲಿ ಮಧ್ಯಕಾಲದ ಕನ್ನ ।
ಡದಿ **ತೊರವೆ ರಾಮಾಯಣ**ವ ಬರೆದ ವೈಷ್ಣವನ ।
ಹದಿನೈದು ನೂರರಲಿ ಬಾಳಿದ **ಕುಮಾರವಾಲ್ಮೀಕಿ**ಯುಂ
ವಂದಿಸುವೆನು ॥ ೧೪ ॥

**ಹ**ರಿಭಕ್ತ ಕೀರ್ತನಾಕರ್ತ ನುದ್ವಿಜ ಪುರಂ ।
ದರದಾ **ಪುರಂದರಂ, ರಾಮಧಾನ್ಯ ಚರಿತ್ರೆ** ।
**ಹರಿಭಕ್ತಿಸಾರ ನಳಚರಿತೆ ಮೋಹನ ತರಂಗಿಣಿ**ಗಳನು ವಿರಚಿಸಿರುವ॥
ವರಕಾಗಿ ನೆಲೆಯೊಳಗೆ ಬೇಡರಲಿ ಜನಿಸಿರ್ದ ।
ವರಕವಿ **ಕನಕದಾಸ**ನಂತೆಯೇ ಹದಿನೈದು ।
ವರೆ ನೂರರಲಿ ಸರಸ ಕನ್ನಡದ ಸರಸತೆಯ ಬೀರಿದನು ನಮಿಪೆನವರ ॥ ೧೫ ॥

**ಹ**ದಿನೇಳನೆಯ ಶತಕದಾದಿಯಲಿ ಕನ್ನಡದ ।
ಬುಧರೊಲಿಯೆ **ಶಬ್ದಾನುಶಾಸನ**ವ ವರಸಂಸ್ಕೃ ।
ತದಿ ಬರೆದ ಹಾಲುವಳ್ಳಿಯ ಜೈನ **ಭಟ್ಟಾಕಳಂಕ**ನಂ ವಂದಿಸುವೆನು ॥
ಷದಿನಾರುವರೆನೂರರಲಿ ಷಡಕ್ಷರದೇವ ।
ಹದಿನಾಲ್ಕುನೂರನಾಲ್ವತ್ತರೊಳ್ ವ್ಯಾಸಕವಿ ।
ಹದಿನಾಲ್ಕುನೂರಹದಿನೈದರಲಿ ಹೆಸರಾದ ಲಕ್ಷ್ಮೀಶರಿರ್ದರಲ್ತೇ ॥ ೧೬ ॥

**ವರ ರಾಜಶೇಖರ ವಿಳಾಸ**ಮಂ **ಶಬರ ಶಂ**।
**ಕರ ವಿಳಾಸ**ಮನಂತೆ **ವೃಷಭೇಂದ್ರ ವಿಜಯ**ಮುಮಂ।
ಬರೆದಿಹ ಯಳಂದೂರ ಶೈವಕವಿ **ಷಡಕ್ಷರದೇವ**ನಂ ವಂದಿಸುವೆನು ॥
ವರ ವಿಪ್ರ **ಲಕ್ಷ್ಮೀಶ**ಗಾದೇವಪುರನಿಲಯ ।
ಗೆರಗುವೆನು ಕನ್ನಡದ **ಜೈಮಿನಿಯ ಭಾರತ**ನ ।
ಪರಮಾದರದೊಳೋದದವರಿಲ್ಲವೀಗ್ರಂಥವಿರದಮನೆಯಿಲ್ಲವಿಲ್ಲಿ । ॥ ೧೭ ॥

**ಮೊ**ದಲು ವೆಂಗಿಯದೇಶವೀಗ ಕೃಷ್ಣಾಜಿಲ್ಲೆ ।
ಮೊದಲು ಮುದುವೊಳಲೀಗ ಜಮಖಂಡಿಯ ಮುಧೋಳ ।
ಮೊದಲನೆಯ ಕವಿವರನ ಮಳಖೇಡವೀಗಿಹುದು ನೈಜಾಮ ರಾಜ್ಯದೊಳಗೆ॥
ಮೊದಲನೆಯ ಕವಿಯೆಂಟುನೂರರೈವತ್ತರಲಿ ।
ಬುಧಬಸವಶಾಸ್ತ್ರಿ ಶಾಕುಂತಲಾದಿಗಳ ಕವಿ ।
ಹದಿನೆಂಟುನೂರು ಮೇಲೈವತ್ತರಲ್ಲಿ ತಾಂ ಬಾಳಿದರ್ ನಮಿಪೆನವರ ॥ ೧೮ ॥

**ಉ**ಸಿರಿದನು ನಾಲ್ಕುರಿಕೆಯಾರಾಧ್ಯ **ಭೀಮ**ಕವಿ ।
**ಬಸವಗುರು ಚರಿತೆ**ಯನು ಕನ್ನಡದಿ ವರ **ಚೆನ್ನ** ।
**ಬಸವಗುರು ಚರಿತೆ**ಯನು ರಸಿಕನು **ವಿರೂಪಾಕ್ಷಪಂಡಿ**ತನು
ವಿರಚಿಸಿದನು ॥
ಉಸಿರುವುದಸಾಧ್ಯವಿದರೊಳು ಸಕಲ ಕವಿವರರ ।
ಹೆಸರಾದ **ಕಂತಿ ಹೊನ್ನಮ್ಮಾ**ದಿ ವಿದುಷಿಯರ ।
ಅಸಮಗುಣಿ ಶೀಘ್ರಕವಿ **ಸರ್ವಜ್ಞ** ಮೊದಲಾದ ಸಕಲರನು
ವಂದಿಸುವೆನು ॥ ೧೯ ॥

**ದೋ**ಷರಾಶಿಗಳಿದರೊಳಿರ್ದೊಡಂ ಗುಣಕಣಮ– ।
ಶೇಷವಾಗಿರ್ದೊಡಂ ತಾಳ್ಮೆಯಿಂ ಕರ್ಣಾಟ ।
ಭಾಷಾಭಿಮಾನಿಗಳ್ ಪ್ರೀತಿಯಿಂ ಸೌಹಾರ್ದದಿಂ ಕ್ಷಮಿಪರೆನ್ನನೆಂದು ॥
ಆಶೆಯಂ ತಳೆದು ಸಲೆಮುಂದಮತಿಯಾದೊಡಂ ।
ಭಾಷಾಭಿಮಾನದಿಂದುತ್ಸಾಹಗೊಂಡು ಗೌ- ।
ರೀಶ ವಾಣೀಶ ಲಕ್ಷ್ಮೀಶರಂ ಭಕ್ತಿಯಿಂ ಸ್ಮರಿಸಿ ಬರೆದೆನಿದನು ॥ ೨೦ ॥

---

**ಟಿಪ್ಪಣಿ:—** (೧) ನೃಪತುಂಗ ಭೂಪಾನುಮತಮಾಯ್ತು- **ಕವಿರಾಜಮಾರ್ಗ**ವನ್ನು ನೃಪತುಂಗನೇ ರಚಿಸಿದನೆಂದೂ ಆತನ ಅನುಮೋದನೆಯಿಂದ ಆವನೋ ಒಬ್ಬ ಆತನ ಆಶ್ರಿತ ಕವಿಯು ರಚಿಸಿದನೆಂದೂ ಪ್ರತೀತಿಯಿರುವದು. (೨) **ಉಭಯ ಕವಿ ಚಕ್ರವರ್ತಿ** ಎಂಬದು ಪೊನ್ನನ ಬಿರುದು. ಆತನು ಕರ್ನಾಟಕ ಸಂಸ್ಕೃತ ಭಾಷೆಗಳೆರಡರಲ್ಲಿಯೂ ಕಾವ್ಯಗಳನ್ನು ರಚಿಸಿದ್ದಾನೆ. (೪) '**ಚಾವುಂಡರಾಯ ಪುರಾಣ**'ವು ಗದ್ಯದಲ್ಲಿ ಬರೆದ ಮೊದಲನೆಯ ಕನ್ನಡ ಕಾವ್ಯವು. (೬) ಮುಳಗುಂದವೂ ಅದರ ಸುತ್ತಲಿನ ಪ್ರದೇಶವೂ ಕನ್ನಡನಾಡಿನಲ್ಲಿ 'ನಡುನಾಡು' (ಮುಖ್ಯ ಪ್ರದೇಶ) ಎನ್ನಿಸಿಕೊಳ್ಳುತ್ತಿತ್ತು. (೮) 'ವೀರಶೈವ ಮತಪ್ರಸಾರಕ ವಚನ ರಚನಾತುರ' ಎಂಬದು ಕವಿಯ ಬಿರುದು. (೧೦) **ಲೀಲಾವತಿ**ಯು ಕನ್ನಡದಲ್ಲಿ ಬರೆಯಲ್ಪಟ್ಟ ಮೊದಲನೆಯ ಕಾದಂಬರಿ; ಕಲ್ಪಿತ ಕಥೆ. (೧೨) ಶಬ್ದಮಣಿ ದರ್ಪಣದಿ ದರ್ಪಣದಿ-ಕೈಗನ್ನಡಿಯಂತಿದ್ದ ಶಬ್ದಮಣಿ ದರ್ಪಣವೆಂಬ ವ್ಯಾಕರಣ ಗ್ರಂಥದಲ್ಲಿ.

ಕರ್ನಾಟಕದಲ್ಲಿ ಆಗಿಹೋದ ೨೬ ಜನ ಮಹಾಕವಿಗಳ ಸ್ಥಳ ಕಾಲ ಕುಲಗಳೂ ಅವರ ಮಹಾ ಕಾವ್ಯಗಳೂ ಈ ಕವಿತೆಯಲ್ಲಿ ಸಮಾವೇಶವಾಗಿವೆ. ಇದೊಂದು ಸಂಕ್ಷಿಪ್ತ ಕವಿಚರಿತೆಯೆಂದು ಹೇಳಬಹುದು. ವಿದ್ಯಾರ್ಥಿಗಳು ಇದನ್ನು ಪಾಠಮಾಡಿಟ್ಟುಕೊಂಡರೆ ತುಂಬ ಅನುಕೂಲವಾಗಬಹುದು.

ಮುಂದಿನ ಪತ್ರಿಕೆಯಲ್ಲಿ ಹೇಳಿದ ೧, ೨, ೪, ೨೧ನೆಯ ಕವಿಗಳ ಕಾಲವು ಕ್ರಮವಾಗಿ ೮೧೯, ೯೪೧, ೯೯೩, ೧೫೯೦ ಎಂದೂ ಪಂಡಿತರ ಅಭಿಪ್ರಾಯವಿದೆ. ಅಭಿನವ ಪಂಪ (ನಾಗಚಂದ್ರ) ನ ಸ್ಥಳವು ವಿಜಯಪುರವೆಂದರೆ ಈಗಿನ ವಿಜಾಪುರವಾಗಿರದೆ ಆತನು ಬಲ್ಲಾಳರಾಜನ ಆಸ್ಥಾನ ಪಂಡಿತನಾಗಿದ್ದಂತೆ ಆಧಾರಗಳು ದೊರೆದಿವೆ. ಕಾದಂಬರಿ ಛಂದೋಂಬುಧಿಗಳೆರಡನ್ನೂ ಒಬ್ಬನೇ ನಾಗವರ್ಮನು ಬರೆದಿಲ್ಲವಾಗಿಯೂ ಹೇಳುವುದುಂಟು. ಎಂದರೆ 'ನಾಗವರ್ಮ' ಎಂಬ ಹೆಸರಿನ ಮೂವರು ಕನ್ನಡ ಕವಿಗಳು ಆಗಿಹೋಗಿರುವರೆಂದಂತಾಗುವದು.

ಈ ಕವಿತೆಗಳಲ್ಲಿ ಬಂದಿರುವ ಎಲ್ಲ ವಿಷಯಗಳ ವಿವರಣೆಯು ಮುಂದಿನ ಪುಟದೊಳಗಿನ ಪತ್ರಿಕೆಯಲ್ಲಿ ಇರುವದು.

# ಕರ್ನಾಟಕ ಕವಿಮಂಡಲ

| | ಹೆಸರು. | ಸ್ಥಳ | ಸು. ಕಾಲ. | ಕುಲ, | ಕಾವ್ಯಗಳು. |
|---|---|---|---|---|---|
| ೧ | ನೃಪತುಂಗ | ಮಾನ್ಯಖೇಟ | ೮೫೦ | ಜೈನ | ಕವಿರಾಜಮಾರ್ಗ |
| ೨ | ಆದಿಪಂಪ | ವೆಂಗಿಪಳು | ೯೦೦ | ,, | ಭಾರತ, ಆದಿಪುರಾಣ |
| ೩ | ಪೊನ್ನ | .... | ೯೫೦ | ,, | ಶಾಂತಿಪುರಾಣ ಜಿನಾಕ್ಷರಮಾಲೆ ಭುವನೈಕರಾಮಾಭ್ಯುದಯ |
| ೪ | ರನ್ನ | ಮುದುವೊಳಲು | ೯೪೯ | ,, | ಗದಾಯುದ್ಧ, ಅಜಿತಪುರಾಣ |
| ೫ | ನಾಗವರ್ಮ ೧ | ವೆಂಗಿಪಳು | ೯೯೦ | ,, | ಕಾದಂಬರಿ, ಛಂದೋಂಬುಧಿ |
| ೬ | ಚಾವುಂಡರಾಯ | .... | ೯೭೮ | ,, | ಚಾವುಂಡರಾಯಪುರಾಣ(ಗದ್ಯ) |
| ೭ | ಅಭಿನವಪಂಪ | ವಿಜಯಪುರ | ೧೧೦೫ | ,, | ರಾಮಾಯಣ, ಮಲ್ಲಿನಾಥ ಪು. |
| ೮ | ನಯಸೇನ | ಮುಳಗುಂದ | ೧೧೧೨ | ,, | ಧರ್ಮಾಮೃತ |
| ೯ | ರಾಜಾದಿತ್ಯ | ಪೂವಿನಬಾಗೆ | ೧೧೨೦ | ,, | ಗಣಿತಶಾಸ್ತ್ರದ ೬ ಕಾವ್ಯಗಳು |
| ೧೦ | ದುರ್ಗಸಿಂಹ | ಸಯ್ಯಡಿ | ೧೧೪೫ | ಬ್ರಾಹ್ಮಣ | ಪಂಚತಂತ್ರ |
| ೧೧ | ಬಸವಗುರು | ಕಲ್ಯಾಣ | ೧೧೬೦ | ವೀರಶೈವ | ೩ ಧಾರ್ಮಿಕ ವಚನಗಳು |
| ೧೨ | ಚೆನ್ನಬಸವಗುರು | ಕಲ್ಯಾಣ | ೧೧೬೦ | ,, | ೬ ಧಾರ್ಮಿಕ ವಚನಗಳು |
| ೧೩ | ನಾಗವರ್ಮ ೨ | .... | ೧೧೬೫ | ಜೈನ | ಕಾವ್ಯಾವಲೋಕನ, ಭಾಷಾಭೂಷಣ, ವಸ್ತುಕೋಶ |
| ೧೪ | ರಾಘವಾಂಕ | ಹಂಪೆ | ೧೧೬೫ | ವೀರಶೈವ | ಸೋಮನಾಥಚರಿತ್ರೆ, ಸಿದ್ಧರಾಮಪುರಾಣ, ಹರಿಶ್ಚಂದ್ರಕಾವ್ಯ |
| ೧೫ | ಹರಿಹರ | ಹಂಪೆ | ೧೧೬೫ | ವೀ. | ಪಂಪಾಶತಕ, ಶಿವಗಣದರಗಳೆ ಗಿರಿಜಾಕಲ್ಯಾಣ |
| ೧೬ | ನೇಮಿಚಂದ್ರ | .... | ೧೧೭೦ | ಜೈನ | ಲೀಲಾವತಿ, ನೇಮಿನಾಥ ಪು. |
| ೧೭ | ರುದ್ರಭಟ್ಟ | .... | ೧೧೮೦ | ಬ್ರಾ. | ಜಗನ್ನಾಥವಿಜಯ, ರಸಕಲಿಕೆ |
| ೧೮ | ಕೇಶಿರಾಜ | .... | ೧೨೬೦ | ಜೈನ | ಶಬ್ದಮಣಿದರ್ಪಣ |
| ೧೯ | ಆಂಡಯ್ಯ | .... | ೧೨೩೫ | ,, | ಕಬ್ಬಿಗರಕಾವ |
| ೨೦ | ಕುಮಾರವ್ಯಾಸ | ಗದಗು | ೧೪೪೦ | ಬ್ರಾಹ್ಮಣ | ಭಾರತ |
| ೨೧ | ,, ವಾಲ್ಮೀಕಿ | ತೊರವೆ | ೧೫೦೦ | ,, | ತೊರವೆರಾಮಾಯಣ |
| ೨೨ | ಪುರಂದರದಾಸ | ಪುರಂದರಗಡ | ೧೫೫೦ | ,, | ಕೀರ್ತನೆಗಳು |
| ೨೩ | ಕನಕದಾಸ | ಕಾಗಿನೆಲೆ | ೧೫೫೦ | ಬೇಡ | ನಳಚರಿತೆ, ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆ |
| ೨೪ | ಭಟ್ಟಾಕಳಂಕ | ಹಾಲುವಳ್ಳಿ | ೧೬೦೪ | ಜೈನ | ಶಬ್ದಾನುಶಾಸನ |
| ೨೫ | ಷಡಕ್ಷರದೇವ | ಯಳಂದೂರು | ೧೬೫೦ | ವೀ. | ರಾಜಶೇಖರವಿಳಾಸ, ಶಬರ–ಶಂಕರವಿಳಾಸ, ವೃಷಭೇಂದ್ರವಿಜಯ |
| ೨೬ | ಲಕ್ಷ್ಮೀಶ | ದೇವಪುರ(?) | ೧೪೧೫ ? | ಬ್ರಾಹ್ಮಣ | ಜೈಮಿನಿಭಾರತ |
| ೨೭ | ಬಸವಪ್ಪಶಾಸ್ತ್ರಿ | ಮೈಸೂರು | ೧೮೫೦ | ವೀ. | ಶಾಕುಂತಲಾದಿಗಳು. |

# ೩. ಕನ್ನಡಿಗನ ಕುಸುರೆಳ್ಳು

**ನೃ**ಪತುಂಗಾದಿ ಕವೀಂದ್ರರಿಂದೆ ಸರಸೋದ್ಗ್ರಂಥಂಗಳಿಂ ಪೂಗಳಿಂ ।
ದುಪಮಾತೀತ ಸುಕಾವ್ಯಭಕ್ತಿರಸದಿಂ ಸತ್ಪೂಜೆಗೊಂಡಿರ್ಪ ನೀಂ ॥
ತಪನಂ ತುಪ್ಪದ ದೀಪದಿಂ ತಣಿವವೋಲ್ **ಕರ್ಣಾಟವಾಗ್ದೇವಿಯೇ** ।
ಕೃಪೆಯಿಂದೆಳ್ಳನು ಬೆಲ್ಲಮಂ ಗ್ರಹಿಸುತಾಶೀರ್ವಾದಮಂ ಪಾಲಿಸೌ ॥ ೧ ॥
**ಬ**ಹುವಿಖ್ಯಾತಚರಿತ್ರೆ ಮಾನ್ಯೆ ಜನನೀ **ಕರ್ಣಾಟಭೂಮಾತೆಯೇ** ।
ಬಹುರೂಪಿಂ ಮದರಾಸು ಕುರ್ಗ ಮೊಗಲಾಯ್ ಮೈಸೂರು ಮುಂಬೈಗಳೊಳ್ ॥
ಬಹುಭಾಗಂದಳೆದಿರ್ಪ ನಿನ್ನೊಳಿರಲೈಕ್ಯಂ ಸ್ನೇಹಮೆಂಬಿಚ್ಛೆಯಿಂ ।
ಬಹುಭಕ್ತ್ಯಾದರದಿಂದಲರ್ಪಿಸುವೆನೆಳ್ಳಂ ಬೆಲ್ಲಮಂ ಕೊಳ್ವುದೌ ॥ ೨ ॥

## (ಪ್ರಾರ್ಥನೆ)

**ಎ**ಳ್ಳಿನ ಕರ್ಪು ಸಕ್ಕರೆಯ ಮಾರ್ದವಮೀಯದು ಕಣ್ಗೆ ಸೊಂಪನಾ ।
ಯೆಳ್ಳನೆ ಮುಳ್ಳುಮುಳ್ಳೆಸಗೆ ಸಕ್ಕರೆಯಿಂ ಬಲುಚಂದಮೊಪ್ಪುಗುಂ ॥
ನಿಲ್ಲದು ಚಂಚಲಂ ಮನವು ನಿನ್ನೊಳಗೆನ್ನುತ ಬಲ್ಲ ರೀತಿಯಿಂ ।
ಕಲ್ಲಿನ ಮೂರ್ತಿಯನ್ನೆಸಗಿ ಪೂಜಿಪೆವೈ ಸಲೆ ನೋಡಲೆಳ್ಳಿನಾ ॥ ೪ ॥
**ಮು**ಳ್ಳಿನೊಳಿರ್ಪುದೇ ಸುರುಚಿ? ಸಕ್ಕರೆಯಲ್ಲಿದೆ ತೈಲದಲ್ಲಿ ಮೇಣ್ ।
ಬಲ್ಲರೆ ಬಲ್ಲರೈ **ಹರಿಯೆ** ನಿನ್ನಯ ನಿರ್ಗುಣ ನಿತ್ಯಭಾವಮಂ ॥
ಎಳ್ಳೊಳಗೆಣ್ಣೆಯುಂ ಸುರುಚಿ ಸಕ್ಕರೆಯೊಳ್ ನೆಲಸಿರ್ಪರೀತಿಯಿಂ ।
ದೆಲ್ಲೆಡೆಯಲ್ಲಿಯಾವರಿಸಿಕೊಂಡಿಹೆಯಂಥರು ನಾವು ಕಾವುದೈ ॥ ೫ ॥

---

**ಮೊದಲನೆಯ ಭಾಗದಲ್ಲಿ ಕರ್ನಾಟಕ ವಾಗ್ದೇವಿಗೂ (೧) ಕರ್ನಾಟಕ ಭೂಮಾತೆಗೂ (೨) ಎಳ್ಳು ಬೆಲ್ಲಗಳನ್ನರ್ಪಿಸಿದೆ.**

**ಎರಡನೆಯ ಭಾಗದಲ್ಲಿ ದೇವರ ಸರ್ವವ್ಯಾಪಿತ್ವವನ್ನು ಹೇಳಿದೆ.**

**ತಪನ–ಸೂರ್ಯ. ಗ್ರಹಿಸು–ಸ್ವೀಕರಿಸು. ಜನ್ಮಂಬೆತ್ತ–ಹುಟ್ಟಿದ. ಮಾರ್ದವ–ಮೆತ್ತಗಿನ ಗುಣ.**

## ೪. ಡಾ. ರವೀಂದ್ರನಾಥ ಠಾಕೂರರವರ ಕವಿತೆಗಳ ಭಾವಾನುವಾದವು

(೧)

**ಯು**ವತಿಯರೆ ಸೃಷ್ಟಿಕರ್ತನ ಕರ್ಮಕುಶಲತೆಯೆ ।
ನಿಮಗೆ ಕಾರಣವಲ್ಲ ನರಜಾಣ್ಮೆಯುಂಟದರೊ- ।
ಳವರು ತಮ್ಮಾಂತರ್ಯ ಸೌಂದರ್ಯದಿಂದಲಂಕರಿಸುವರು ನಿರುತ ನಿಮ್ಮ ॥
ಕವಿವರರು ಕಲ್ಪನೆಯ ಬಂಗಾರದೆಳೆಗಳಿಂ ।
ದಪನಗುಂಠನವನೆಸಗುವರು ಚಿತ್ರಶಿಲ್ಪಿಗಳು ।
ಭುವನದೊಳ್ ಸಾವು ಮುಪ್ಪುಗಳಿಲ್ಲದಿರುವ ಸದ್ರೂಪವನು ಚಿತ್ರಿ
ಸುವರು ॥ ೧ ॥

**ವ**ರುಣದೇವತೆ ಮುತ್ತುಗಳನಿತ್ತು, ಭೂದೇವಿ ।
ವರಸುವರ್ಣವನಿತ್ತು, ವನಗಳು ವಸಂತದೊಳ- ।
ಗೆರೆದು ಪೂಮಳೆಯಿಂದ ಸಿಂಗರಿಸಿ ಸಲೆ ನಿಮಗಮೌಲ್ಯತೆಯನೀಯುತಿಹುವು ॥
ನರರ ಹೃದಯೇಚ್ಛೆಗಳು ತಮ್ಮ ವೈಭವವನ್ನು ।
ಸುರಿದಿಹುವು ನಿಮ್ಮ ತಾರುಣ್ಯಕ್ಕೆ ಮರುಳಾಗಿ ।
ತರುಣಿಯರೆ ನೀವರ್ಧ ಪೆಣ್ಗಳುಳಿದರ್ಧ? ನಾನರಿಯೆ ಕನಸೋ
ಮಾಯೆಯೋ ॥ ೨ ॥

(೨)

**ಅಂ**ಧ ಬಾಲಿಕೆಯೊಬ್ಬಳೆನಗೆ ಪೂಮಾಲೆಯನು ।
ಚೆಂದದಲಿ ನೀಡಿದಳು ಮುಚ್ಚಿ ತಾವರೆಯೆಲೆಯ ।
ಸಂದ ಪೂದೋಟದಲಿ ನಗುತಿರಲು ಬಾಲರವಿ, ದುಃಖಾಶ್ರುಸುರಿಯೆ ಧರಿಸಿ ॥
ನೊಂದು ನುಡಿದೆನು ಭರದಿ ಮುದ್ದಿಟ್ಟು ಮಮತೆಯಲಿ ।
ಕಂದ ನೀನಂಧಳಾಗಿಹೆ ಪೂಗಳಂತೆಯೇ ।
ಇಂದು ನೀನೆನಗಿತ್ತ ಕಾಣಿಕೆಯ ಸೌಂದರ್ಯವನು ತಿಳಿಯಲಾರೆ ನೀನು ॥೩॥

( ೩ )

**ಪ**ರಿಪರಿಯ ಬೆಳಸುಗಳ ಹಸಿರುಡುಗೆಯನ್ನುಟ್ಟು।
ವರುಷ ಋತುವಿನ ಸುಭಗೆ ಭೂದೇವಿ ಶೋಭಿಸಲು।
ಗಿರಿಶಿಖರದಿಂದಿಳಿದು 'ಗುಳು ಗುಳು' ನಿನಾದದಿಂ ಹರಿಯುತಿಹ ಶುಭ್ರಜಲದ॥
ಗಿರಿಶಿಲಾಜಲಧಾರೆ ಪುತ್ರವಾತ್ಸಲ್ಯದಿಂ।
ಕರೆವ ಮಾತೆಯು ದುಗ್ಧಪಾಹಿಸಿಯ ತೆರದಿಂದೆ।
ಮೆರೆಯುತಿರೆ, ರವಿರಶ್ಮಿ ಕಿರುಮೋಡದೊಳ್ಮುಳುಗಿ ತಣ್ಪುವಡೆ
ದೆಸೆಯುತಿರಲು ॥ ೧ ॥

**ಮ**ನೆಯ ಮುಂದಿನ ಚಿಕ್ಕ ಕಾಲುವೆಯ ಜಲದಲ್ಲಿ।
ಮನವ ಮೋಹಿಸುವ ಕಾಗದದೊಂದು ಹಡಗನ್ನು।
ಘನತರಾಮೋದದಲಿ ನಡೆಸುತಿರಲೆಣೆಯಿಲ್ಲವಾಯ್ತೆನ್ನ ಮನದ ಸುಖಕೆ॥
ತನು ನಡುಗೆ ಭರದೆ ಬೀಸಿತು ಮಳೆಯ ತಂಗಾಳಿ।
ಹಸಿಗಳೊಂದೆರಡುದಿರೆ ಚಿಂತೆಯಲಿ ನೋಡಿದೆನು।
ಮುಸಿದ ಸೃಷ್ಟಿಯ ಘೋರ ರೂಪದಿಂದೆದೆಯೊಡೆದು ನೀರಾಯ್ತು
ಕಷ್ಟ! ಕಷ್ಟ! ॥ ೨ ॥

**ಉ**ರಿದೇಳ್ವ ಕೋಲ್ಮಿಂಚು ಕಣ್ಗೆಡಿಸೆ ಮೇಘರವ।
ವ್ರಣೆನಡುಗಿಸಲು ಧರೆಯ ಮುಸುಲಧಾರಾವೃಷ್ಟಿ।
ಸುರಿದುದೀ ಬ್ರಹ್ಮಾಂಡ ಘಟವೊಡೆದು ಸೋರ್ವ ಜಲಧಾರೆಯೋ
ಪೇಳೆನಲ್ಕೆ ॥
**ಅ**ಕಟ! ಮುಳುಗಿದುದೆನ್ನ ಹಡಗು ಕೆನ್ನೀರೊಳಗೆ।
**ಹ**ರುಷದಲಿ ನಲಿವೆನ್ನ ಸಂತಸವ ಸಹಿಸದಲೆ।
ಬಿರುಗಾಳಿ ಮತ್ಸರದೆ ಬಿರುಮಳೆಯ ಕರೆತಂದುದಕಟನುತ
ಮರುಗುತಿರ್ದೆ ॥ ೩ ॥

**ಕ**ಳೆದುದಾ ಬಾಲ್ಯದಾಟದ ದಿನವು ಯೌವನವು।
ಕಳೆಯೆ ಬಂದಡಿಸಿದುದು ದುರ್ವಾರ ವಾರ್ಧಕವು।
ಬಳಲಿ ಬತ್ತಿದುವೆನ್ನ ತನುಮನಗಳೀ ಘೋರಸಂಸೃತಿಯ ತಾಪದಿಂದೆ॥
ಖಳವಿಧಿಯೆ ಸಂಸೃತಿಯ ದುಷ್ಕೃತಿಯ ನೆನೆದು ಮನ।
ದೊಳಗದನು ಹಳಿಯುತಿರೆ ಬಾಲ್ಯದಲಿ ಹಡಗನ್ನು।
ಮುಳುಗಿಸಿದ ಬಿರುಗಾಳಿಯನು ಹಳಿದ ಮಾತು ನೆನಪಾಗಲಾಶ್ಚರ್ಯ
ಮಾಯ್ತು ॥ ೪ ॥

( ೪ )

**ಮ**ರಣವೇ ಲೋಭಕ್ಕೆ ಕೊನೆ ಗಡ !
ಧರಿಸಿ ಲೋಭವ ನಲಿಯುತಿರೆ ನರ ।
ಹರುಷವಾರಿಧಿಯೊಳಗೆ ಬಹು ದುರ್ಯೋಗತಮದೊಡನೆ ॥
ಬರುವ ಝುಂಝಾವಾತಘಾತದೆ ।
ಹರಿದು ಹಂಚಾಗುವನು ಧರೆಯಲಿ ।
ಸ್ಥಿರವದಾರಿಗೆ ಸುಖದ ಬಾಳುವೆ ಸೃಷ್ಟಿತತ್ವವಿದು ॥ ೧ ॥

**ಮ**ನದ ಬಯಕೆಗಳೆನಿತು ಸಾಧಿಸ ।
ಲನಿತನಿತು ಲೋಭಕ್ಷುಧಾಗ್ನಿಯು ।
ಮನದೊಳುರಿದೇಳುವುದು ವಿಶ್ವವೆ ತನ್ನ ತುತ್ತೆಂದು ॥
ಘನವಿವೇಕವ ಮರೆದು ನುಂಗಲು ।
ಮನುಜನಾಲೋಚಿಸುವನಕಟಾ ! ।
ಜನರೊಳಪಹಾಸ್ಯಕ್ಕೆ ನಿಂದೆಗೆ ಲಕ್ಷ್ಯವೀಯದೆಯೆ ॥ ೨ ॥

**ನಿಂ**ದ್ಯ ಭಕ್ಷ್ಯದೆ ಬೆಳೆಯೆ ತನ್ನೊಳು ।
ನಿಂದ್ಯ ಗುಣಗಳು ನೀಚ ನಿರ್ದಯ ।
ನಿಂದ್ಯ ನಾಚಿಕೆಗೇಡಿಯೆನಿಪಂ ಸ್ವಾರ್ಥಪರನರನು ॥
ನಿಂದ್ಯ ಮಾನವಲೋಭಿ ಸರ್ಪನು ।
ನಿಂದ್ಯಕಾರ್ಯಾಸಕ್ತನಾಗಿರೆ ।
ನಿಂದ್ಯಭಕ್ಷಕ ಗೃಧ್ರನಂದದಿ ಮೃತ್ಯುವೆರಗುವುದು ॥ ೩ ॥

**ಸ್ವಾ**ರ್ಥಸಾಧನೆಯೆಂಬ ಭೂತಕೆ ।
ಸ್ವಾರ್ಥಸಾಧಕನಾತ್ಮವೇ ಬಲಿ ।
ಪಾರ್ಥಿವಪದಾರ್ಥಂಗಳಿಂ ಸ್ವಾರ್ಥಾಗ್ನಿಯಾರುವುದೇ ॥
ಸ್ವಾರ್ಥನೌಕಾವಾಹಿಯರಿಯನು ।
ಸ್ವಾರ್ಥನೌಕೆಯು ಗುಪ್ತಮಾರ್ಗವ ।
ಸ್ವಾರ್ಥವನಿಶಂ ಮಿತ್ರಮೃತಿಗಿರಿಯೆಡೆಗೆ ಸಾಗುವುದು ॥ ೪ ॥

**ಟಿಪ್ಪಣಿ:**—೧. ಹೆಣ್ಣು ಹೊನ್ನು ಮಣ್ಣು ಈ ಮೂರು ಮನುಷ್ಯನ ಮನಸ್ಸನ್ನು ಮೋಹಿಸಿ ಅವನನ್ನು ನಾನಾಬಗೆಯ ಕಷ್ಟಕ್ಕೆ ಗುರಿಮಾಡುವವು. ಅವುಗಳಲ್ಲಿ ನಿಜವಾಗಿ ಅಂಥ ಮಹತ್ವದ ಗುಣವೇನೂ ಇಲ್ಲದೆ ಇದ್ದರೂ ಮನುಷ್ಯನು ಕೇವಲ ತನ್ನ ಕಲ್ಪನೆಯಿಂದಲೇ ಅವಕ್ಕೆ ಅಷ್ಟು ಮಹತ್ವವನ್ನು ಕಲ್ಪಿಸಿಕೊಂಡು ತೊಳಲಾಡುವನು, ಎಂಬುದೇ ಈ ಕವಿತೆಗಳ ತಾತ್ಪರ್ಯವು.

**ಶಬ್ದಕೋಶ:**—ನಿವಗೆ-ನಿಮಗೆ. ಅವಗುಂಠನ-ಮುಖದ ಮೇಲಿನ ಸೆರಗು.

೨. ಈ ಕವಿತೆಯಲ್ಲಿಯೂ ಮೇಲಿನ ಧ್ವನಿಯೇ ಇನ್ನೊಂದು ಬಗೆಯಲ್ಲಿ ಪ್ರಕಟವಾಗಿದೆ. 'ಕಂದ! ಪೂಗಳಂತೆಯೇ ನೀಂ ಅಂಧಳಾಗಿಹೆ' ಹೂವುಗಳಿಗೆ ತಮ್ಮ ಸೌಂದರ್ಯ ಸುವಾಸನೆಗಳ ಅರಿವು ಇರುವದಿಲ್ಲ. ಹಾಗೆಯೇ ಅಂಧಳಾದ ಬಾಲಿಕೆಗೆ ತನ್ನ ಸೌಂದರ್ಯದ ಕಲ್ಪನೆಯಿರುವದಿಲ್ಲ.

೩. ಪ್ರಪಂಚವನ್ನು ಬಾಲಕರ ಆಟಕ್ಕೆ ಹೋಲಿಸಿ ಗಹನವಾದ ತತ್ವಜ್ಞಾನವನ್ನು ಅತಿಸುಲಭವಾಗಿ ವಿವರಿಸಿ ತೋರಿಸುವದು ಕವಿ ರವೀಂದ್ರರ ಈ ಕವಿತೆಯ ಒಂದು ವಿಶಿಷ್ಟ ಲಕ್ಷಣ. ಕೊನೆಯ ಪದ್ಯದಲ್ಲಿ ಹೇಳಿದ ಮಾನವ ಜೀವನದ ಗುಟ್ಟನ್ನು ಮೊದಲಿನ ಮೂರು ಪದ್ಯಗಳಲ್ಲಿ ಹೇಳಿದ ಒಂದು ಬಾಲಕರ ಆಟದ ಉದಾಹರಣೆಯಿಂದ ಬಹು ಸುಗಮವಾಗಿ ವಿವರಿಸಿರುವರು. ಮೊದಲನೆಯ ಪದ್ಯದೊಳಗಿನ ಮಲೆನಾಡಿನ ವರ್ಷಾಕಾಲದ ಒಂದು ಚಿತ್ರವನ್ನೂ, ೨—೩ ನೆಯ ಪದ್ಯಗಳೊಳಗಿನ ಮಳೆಯ ವರ್ಣನೆಯ ಗಾಂಭೀರ್ಯವನ್ನೂ ನೋಡಬೇಕು.

**ಶಬ್ದಕೋಶ:**— ಮೇಘರವ—ಗುಡುಗಿನ ಧ್ವನಿ. ಬ್ರಹ್ಮಾಂಡವೆಂಬದು ಒಂದು ಘಟ-ಕೊಡ. ಅದು ಒಡೆದು ಸೋರುವ ಜಲಧಾರೆಯೋ ಎಂಬಂತೆ ಮುಸುಲ (ಒನಕೆ) ಧಾರಾ ವೃಷ್ಟಿ-ಅತಿ ದೊಡ್ಡ ಮಳೆಯು-ಸುರಿದುದು.

## ಪ್ರಶ್ನೆಗಳು

೧. ದೇವರು ಹುಟ್ಟಿಸಿದ ಸ್ತ್ರೀಮೂರ್ತಿಯನ್ನು ಮನುಷ್ಯನು ಹೇಗೆ ಹೇಗೆ ಅಲಂಕರಿಸುವನು ?

೨. ಈ ಕವಿತೆಗಳೊಳಗಿನ ಒಳ್ಳೆಯ ರೂಪಕಗಳನ್ನು ವಿವೇಚಿಸಿರಿ. ಚಿಕ್ಕಮಕ್ಕಳ ಕಾಗದದ ಹಡಗದ ಆಟದಿಂದ ವ್ಯಕ್ತವಾಗುವ ನಮ್ಮ ಜೀವನದ ಗುಟ್ಟನ್ನು ವಿವೇಚಿಸಿರಿ.

೪. 'ಲೋಭಕ್ಕೆ ಮರಣವೇ ಕೊನೆ' ಎಂಬದನ್ನು ಪ್ರತಿಪಾದಿಸಿರಿ.



# ೫. ವಾಸವದತ್ತೆ.

ಘೋರಾಂಧಕಾರದಲಿ ಮುಳುಗಿರಲು ಜಗವೆಲ್ಲ ।
ತಾರಗೆಗಳಡಗಿರಲು ಮೋಡದಲಿ ಜನರೆಲ್ಲ ।
ಸೇರಿ ತಮ್ಮಾಲಯವ ಮಲಗಿರಲು, ಮಲಗಿ ಮಥುರಾಪುರಿಯೆ ನಿದ್ರಿಪಂತೆ ॥
ತೋರುತಿರೆ ಸಂನ್ಯಾಸಿಯುಪಗುಪ್ತನಾಪುರಿಯ ।
ಸೇರಿ ಹೆಬ್ಬಾಗಿಲಲಿ ಮಲಗಿ ನಿದ್ರಿಸುತಿರಲು ।
ನಾರಿಯೊಬ್ಬಳ ಲಲಿತನೂಪುರದ ರವದಡಿಯೆ ಮೂಡಿತವನೆದೆಯಮೇಲೆ ॥ ೧ ॥

ಶ್ರಾವಣದ ಮಧ್ಯರಾತ್ರಿಯ ತಿಮಿರರಾಶಿಯಲಿ ।
ಭೂವನಿತೆ ಮುಳುಗಿರಲ್ಕೆದೆಯಮೇಲಡಿಯಿಡಲು ।
ಭೂವಿನುತನುಪಗುಪ್ತನತಿವಿಸ್ಮಯಂಗೊಂಡು ನಿದ್ರೆಯಿಂದೆದ್ದು ಕುಳಿತು ॥
ಆ ವನಿತೆ ಮೋಸವಾಯ್ತುಕಟೆನುತ ಕರದೀಪ ।
ದಾವರಣವನು ಸರಿಸೆ ನೋಡಿದನು ನಸುನಗುತ ।
ಲಾಪ್ಪೂರ ವೇಶ್ಯೆ ವಾಸವದತ್ತೆಯನುಪಮದ ಲಾವಣ್ಯರಾಶಿಯನ್ನು ॥ ೨ ॥

ಪರಿಪರಿಯಲಂಕಾರಗಳ್ ಪ್ರಿಯನ ಮುಖಚಂದ್ರ ।
ಕಿರಣರಂಜಿತೆಯಂತೆ ವರತನುಚ್ಛವಿಯನಾ ।
ಪಸಿರುವ ಚೀನಾಂಬರದ ಮರೆಯೊಳೆಸೆಯುತಿರೆ ಕಣ್ಮನವ ಸೆಳೆಯುತಿರಲು
ಅರುಣೋದಯದೊಳರಳಿ ತನಿಗಂಪ ಬೀರುವೆಳೆ ।
ಯರವಿಂದದೆಸಳಂತೆ ಕೋಮಲೆ ಸುವರ್ಣೆ ಸುಂ ।
ದರಿ ಸುದೃಢೆ ಶೈಶವೋದ್ಭಿನ್ನಯೌವನೆ ರಮಣಿ ಸಂಪನ್ನೆ ಮೆರೆದಿರ್ದಳು ॥ ೩ ॥

ಪುರುಷವರನೆದೆಯಮೇಲಡಿಯಿಟ್ಟ ದೋಷದಿಂ ।
ದುರೆ ಬೆದರಿ ಚಿಂತಿಸುವ ಹರಿಣಲೋಚನೆ ತನ್ನ ।
ವರತನುವ ಪಿಂತೆಗೆದು ಮೇಲ್ಸೆರಗನೋಸರಿಸಿಕೊಳುತೆ ಕಡೆಗಣ್ಣಿನಿಂದೆ ॥

ತರುಣನ ಸುರೂಪವುಂ ಸುದೃಢತರ ಕಾಯುವುಂ।
ಪರಮ ತೇಜಃಪುಂಜ ಮುಖಮುದ್ರೆ (ಮುಖಭಾವ) ಶಾಂತಿರಸ।
ವೆರಸಿ ಮೋಹಕ ಸುಧಾರಕಸಂತೆ ಮೆರೆವುದಂ ನೆರೆನೋಡಿ ಮೋಹಿಸಿದಳು ॥೪॥
**ಮ**ಧುರಾಂಗಿ ನಸುಲಜ್ಜೆಯಿಂದ ನಾಲಗೆ ತಡೆಯು।
ಲಧರವುರೆನಡುಗುತಿರೆ ದೃಷ್ಟಿ ಮೇಲೇಳದಿರೆ।
ಮಧುರ ರವದಲಿ ನುಡಿಪಳಾಯುತಿಗೆ ತರುಣ ಸುಕುಮಾರ
ನೀಂ ಕ್ಷಮಿಸು ಕ್ಷಮಿಸು ॥
ಮಧುರಗುಣ ಸುಮಧುರಾಕಾರ ದಯಮಾಳ್ಪುದೀ।
ಮೃದುಮಧುರತಸುವಿದೀ ದುರ್ಧರಶಿಲಾಶಯ್ಯೆ।
ಯಧಿಕತರ ಕಷ್ಟಮಂ ಸಹಿಸೆ ಹುಟ್ಟಿದುದಲ್ಲ ನಡೆಯೆನ್ನ ಮಂದಿರಕ್ಕೆ ॥೫॥
**ವ**ಸಿತೆಯು ಮನೋಗತವನರಿತನುಪಗುಪ್ತನತಿ।
ವಿನಯದೊಳು ಪೇಳಿದಂ ಸಮಯವೆನಗಿಲ್ಲೀಗ।
ವಸುಕೂಲಸಮಯನ್ಮೈತರಲಾಸೆ ಬಹೆನು ನಿನ್ನಾಲಯಕೆ ಮೋದದಿಂದ॥
ನಿನಗಾಗಿ ಕಾಯ್ದು ಕುಳಿತಿರುವ ವಿಟನೆಡೆಗೆ ಪೋ-।
ಗಸುನಯದೆ ಸಂತಸಂಗೊಳಿಸವನ ನೀನೀಗ।
ಲೆನಗಾಗಿ ಮನದಿ ಮರುಗದಿರಮ್ಮ! ಈ ಶಿಲಾಶಯ್ಯೆಯೇ ಸೌಖ್ಯವೆನಗೆ ॥೬॥
**ಸಿ**ಡಿಲೆರಗಿ ಕಮರಿದೆಳೆವಾಳೆ ಸುಳಿಯಂದದಲಿ।
ಕಡಿದೊರಗಿಸಿರುವಶೋಕದ ತಳಿರಿನಂದದಲಿ।
ನಡುನಡುಗಿ ಸಲೆಬಾಡಿದಾನನದ ವೇಶ್ಯೆ ವಾಸವದತ್ತೆ ಗಾಸಿವಡೆದು॥
ಅಡಿಯ ಮುಂದಿಡಲಾರದಲೆ ತೊಳಲಿ ಬಳಲುತಿರೆ।
ಘುಡುಘುಡಿಪ ಘನಘೋರ ಮೇಘರವವಾದಂತೆ।
ಸಿಡಿಲಿನ ಶಲಾಕವೇ ಹೊಳೆದಂತೆ ಕಣ್ಗೆಟ್ಟ ಮನದೊಳಗೆ ತೋರಿತವಳ್ಗೆ* ॥೭॥
**ಮೂ**ಡಗಾಳಿಗಳಡಗಿ ತೆಂಕಣಿಂ ನಸುಗಾಳಿ।
ಯಾಡತೊಡಗಿತು ಧರಾವನಿತೆ ನವಯೌವನದ।
ಜೋಡಣೆಯು ಹೂಡಿದಳು ತರುಲತೆ ಲತಾಂತಗಳ ಚೆಂದಳಿರ ಗೊಂಚಲೆರಗಿ॥
ನೋಡುವರ ಕಣ್ಮನವ ತಣಿಪ ಫಲಮಂಜರಿಯು।
ನೀಡುವುವೊ ದಾರಿಗರಿಗೆನೆ ಫಲಭರದೆ ಬಾಗಿ।
ನಾಡೆ ಶೋಭಿಸುತಿರ್ದುವೆಡಬಲದಿ ಮೆರೆವ ಮಥುರಾಪುರಿಯ ಬೀದಿಗಳಲಿ ॥೮॥

**ಹ**ಸುರುಡುಗೆಯನ್ನುಟ್ಟು ಚೆಂದಳಿರ ತಿಲಕವನು ।
ಸೊಸಲೊಳಗೆ ಧರಿಸಿ ಫಲಮಂಜರಿಯಲಂಕಾರ ।
ಪೆಸೆಯೆ ಮರಿದುಂಬಿಗಳ ಮುಡಿಯೊಳಗೆ ಪೂಮಾಲೆಗಳನು ಮುಸದಣಿಯೆ ಮುಡಿದು ॥
ಸಸುನಗೆಯು ಬೆಳದಿಂಗಳೆಂಬ ಚಿನಾಂಬರದ ।
ಮುಸುಕಿನ ಸವಾಂಗನೆ ಧರಾಮಾನಿನಿಗೆ ಭರದೊ ।
ಳುಸಿರಿದುವು ಪ್ರಿಯಕರವಸಂತನೃಪನೊಸಗೆಯನು ಕೋಗಿಲೆಗಳುಲಿದು ನಲಿದು ॥ ೯ ॥

**ನ**ವವಸಂತಾಗಮನವನು ಕಂಡು ನೃಪವರಂ ।
ನವವಸಂತೋತ್ಸವವ ಸಾರಿದನು ನಗರದಲಿ ।
ನವಋತುಸ್ನಾತೆ, ಜ್ಯೋತ್ಸ್ನಾಸ್ನಾತೆ, ವನದೇವಿಯೋಲಗದೆ ನಡೆವುದೆಂದು ॥
ನವತರುಣ ತರುಣಿಯರು ಮೋದದಲಿ ನಡೆದರು- ।
ತ್ಸವಕೆಂದು, ವೃದ್ಧರವರೊಡನೆ ಬರಲೆಳೆಮಕ್ಕ !
ಳವರ ಹಿಂಬಾಲಿಸಿದರಿಂತು ಮಥುರಾಪುರಿಯು ಜನರಹಿತವಾದುದಂದು ॥೧೦॥

**ಜ**ನರೆಲ್ಲ ವನದೇವಿಯೋಲಗದೊಳುತ್ಸವದ ।
ಘನತರಾಮೋದದಲಿ ತೊಡಗಿರ್ದರಿತ್ತಲಾ ।
ಜನಹೀನನಗರದಲಿ ಯತಿತಿಲಕನುಪಗುಪ್ತನೈದುತಿರೆ ವೇಗದಿಂದೆ ॥
ಜನರೊಬ್ಬರಿಲ್ಲದಿಹ ಸಮಯವನು ನೋಡುತಲೆ ।
ನೆನಪಾದಳೇನಣ್ಣ ! ವೇಶ್ಯೆ ವಾಸವದತ್ತೆ ।
ನಿನಗೆನುತ ಕೋಗಿಲೆಗಳುಲಿಯುತಿರೆ ಗಹಗಹಿಸಿ ನಗುತಿರ್ದನಮೃತಕರನು ॥೧೧

**ಯ**ತಿತಿಲಕನಾಗ ನಗರವ ಬಿಟ್ಟು ಹೊರಗೆ ಬಂ ।
ದತಿವೇಗದಿಂದೆ ಕೋಟೆಯ ಗೋಡೆಯಂಚಿನಲಿ । (ಯೋರದಲಿ)
ಯತಿವಿಲಾಸಿನಿಯೆನಿಸಿ ಮೆರೆದಿರ್ದ ವೇಶ್ಯೆ ವಾಸವದತ್ತೆಯೆಡೆಗೆ ಬಂದು ॥
'ಮತಿಹೀನರಾಗಿ ಪಶ್ಚಾಚರಣೆ ಗೈವರೀ ।
ಗತಿಗೆ ಗುರಿಯಾದೊಡೇನಾಶ್ಚರ್ಯ' ವೆಂದುಸಿರು ।
ತತಿಕರುಣೆಯಿಂದವಳ ಶಿರವ ಪಿಡಿದೆತ್ತಿ ತನ್ನಯ ತೊಡೆಯೊಳಿಟ್ಟುಕೊಂಡು ॥

ತೃಷಿತವಿಟರಿಂಗಮೃತವನ್ನಿತ್ತು ಬೆಂಡಾಗಿ।
ಕೃಶವಾದುದೀಯಧರವೆನೆ ಕಂದಿ ಕುಂದಿಹುದು।
ವಶವಾಗದಿರುವ ಸತ್ಪುರುಷರೆದೆಯೊಡೆವಂತೆ ಸಮ್ಮೋಹನಾಸ್ತ್ರವನ್ನು ॥
ಎಸೆದೆಸೆದು ದಣಿದೀಗ ವಿಶ್ರಾಂತಿವಡೆವಂತೆ।
ಬಿಸಜಾಂಬಕಗಳೆರಡು ಮುಚ್ಚಿಹವು ಸರ್ವಾಂಗ।
ವಸುವುಗುಂದೀಗಲೋ ಇನ್ನರ್ಧಗಳಿಗೆಗೋ ಎಂಬಂತೆ ತೋರುತಿಹುದು ॥೧೩॥
ನೊದಲ ವಿಟಸಂಗಸಂಗದ ದಿಸದ ಮುತ್ತುರ।
ತ್ನದ ರಾಶಿ ಸರ್ವಾಂಗದೊಳು ಮೆರೆವುದೆನೆ ಮುಳ್ಳ।
ತುದಿ ಮೊನೆಯನಿಡಲೆಂಬು ದೊರೆಯದೊಲು ಬೊಕ್ಕೆಗಳು ಸುರಿದಿಹುವು
ಬಿಳಿದು ಕೆಂಪು ॥
ವಿಧಿವಿಲಾಸದ ಬಲೆಯ ಸುವಿಚಾರಶಸ್ತ್ರದಲಿ।
ಸದೆದೊಗೆದು ಸನ್ಮಾರ್ಗದಲಿ ನಡೆಯಲಾರದಿರು।
ವಧಮರನು ಕಣ್ಣೆತ್ತಿನೋಡದಲೆ ಬಿಡುವುದಿದು ಸುಜನರಿಗೆ ಸರಿಯೆ
ಹರಿಯೇ ॥ ೧೪ ॥
ಇಂತು ಚಿಂತಾಕ್ರಾಂತನಾಗಿಯುಪಗುಪ್ತಯತಿ।
ಕಂತು ಪಿತನನು ನೆನೆದು ತಂದ ಮಂತ್ರೋದಕವ।
ಸಂತಸಂ ಮಿಗಲವಳ ಕಣ್ಣಗಳಿಗೆ ಪೂಸಿ ಬತ್ತಿರುವ ಬಾಯ್ಗೆರೆದು ತಣಿಸಿ ॥
ಚಿಂತೆಯನು ಬಿಟ್ಟೇಳು ಮಗುವೆ ವಾಸವದತ್ತೆ।
ಪಿಂತಣಾ ದುಷ್ಕೃತಿಯ ಸೆರೆಮುರಿದು ಸಂಸೃತಿಯ।
ಸಂತಾಪಹಾರಕ ಶ್ರೀಹರಿಯ ನೆನೆಯೆಂದು ಪ್ಯೈದಡವೆ ಮೋದದಿಂದ ॥೧೫॥
ಅಂದು ಯತಿ ನೂಪುರದ ರವದ ಪಾದಾಘಾತ।
ದಿಂದ ನಿದ್ರಾಭಂಗವಾಗೆದ್ದು ಕುಳಿತಂತೆ।
ಇಂದು ಯತಿಮುನಿತ್ತ ಚೈತನ್ಯದಿಂದ ಕಂದೆರೆದೆದ್ದು ಕುಳಿತಳವಳು ॥
ಹಿಂದಾದ ಕಥೆಯನೆಲ್ಲವ ನೆನೆದು ಪೇಳಿದಳು।
ತಂದೆ ನೀನೈತಂದೆಯೇಕಿಲ್ಲಿ? ಪಾಪಿಯೆನ।
ಗಿಂದು ಮರಣವು ಬಹುದು ಸಕಲ ದುಷ್ಕೃತ್ಯಗಳ ಕೊನೆಯಹುದು
ಜಗದೊಳಿನ್ನು ॥೧೬॥

ಬಯಕಿ ಬಾಳುವ ಬಯಕೆ ಸಾಕೆಂದು ನೆನೆದಿರ್ದೆ ।
ಸಿದೆ ನೋಡು ಸರ್ವಾಂಗಸೌಂದರ್ಯ! ಸೌಭಾಗ್ಯ ।
ಇದೆನೋಡು! ನೆನಪಾಯ್ತು ನಿನ್ನ ಸುಡಿ**ಯೀ ಶಿಲಾ ಶಯ್ಯೆಯೇ**
**ಸೌಖ್ಯ**ವೆಂಬ ॥
ಬುಧವರನೆ! ಅತುಲಕರುಣಾಮಯನೆ! ಬಹುದುಷ್ಟ ।
ಹೃದಯವಿದು ಸತ್ಯಶೌಚಾಚಾರ ಸತ್ಪ್ರೇಮ ।
ಇದರೊಳೆಳ್ಳಷ್ಟಿಲ್ಲ ಧನದಾಶೆ ಕಾಮವಾಸನೆಗಳಾಗರವಿದಹುದು ॥೧೭॥
ಆದುಷ್ಟ ವಾಸನೆಗಳುಕ್ಕಿ ಹೊರಸೂಸಿದುವೊ ।
ಈ ದುಷ್ಟ ದೇಹಮಂ ದಂಡಿಸಲು ಪೇಳೆಸಲ್ ।
ಬಾಧೆಗೊಳಗಾಗಲಾನೀ ಪರಿಯ ಪುರವಾಸಿಗಳು ಬಿಸುಟರೆನ್ನನಿಲ್ಲಿ ॥
ಮೋದದಲಿ ನಲಿವ ಇಟರೀಗೆನ್ನ ಮಂದಿರದ ।
ಹಾದಿಯನು ತುಳಿಯದಂತಾಗೆ ವೈಭವವೆಲ್ಲ ।
ಕಾದೆಣ್ಣೆಯಲಿ ಬಿದ್ದನೀರಿನಂತಡಗಿದುದು ಮುಂದೇನು ಗತಿಯೊ
ಯತಿಯೇ ॥೧೮॥
ಸೆರಗಿನಲಿ ದೀಪನಂ ಮರೆಮಾಡಿ ಇಟನೆಡೆಗೆ ।
ತೆರಳುವಂದದೆ ಮನವು ಸುಜ್ಞಾನದೀಪವನು ।
ಹೊರಗಣಿಂದ್ರಿಯ ಲಾಲಸೆಯ ಪಟದ ಮುಸುಕಿಟ್ಟು ಸಾಗುವುದು
ನರಕದೆಡೆಗೆ ॥
ಪರರೊಡವೆ ಪರರಗುಣವಪಹಾರಗೈಯೆ ಯತಿ ।
ವರನ ನಿದ್ರಾಭಂಗದಾಘಾತದಂತಾಗಿ ।
ಬರಲೊಮ್ಮೆ ಸುಜ್ಞಾನವದನಿರದೆ ಮುಸುಕುವುವು ಷಡ್ರಿಪುಗಳೊಂದು
ಗೂಡಿ ॥೧೯॥
ನೀರೊಳಗೆ ಬಿಟ್ಟ ಕೊಡವದು ತುಂಬಲಿಳಿವಂತೆ ॥
ಘೋರದುಷ್ಕೃತ್ಯಗಳ ಭಾರದಲಿ ಮಾನವನು ।
ಸಾರುವನಧೋಗತಿಯ ಬಳಿಕ ಸತ್ಪುರುಷರ ಸುಸಂಗತಿಯ ಸೂತ್ರದಿಂದೆ ॥
ಏರಿಬಂದರೆ ಮೇಲೆ ಸುವಿವೇಕಗವಿರಶ್ಮಿ ।
ತೋರುವುದು ಸನ್ಮಾರ್ಗವನು ತಾನೆ, ನಿನಸೀಗ ।
ಬೇರೆಗತಿ ಬೇಕಿಲ್ಲ ತೆರಳೆಂದು ನುಡಿದನುಪಗುಪ್ತಯತಿ ಮಮತೆಯಿಂದ ॥೨೦॥

**ಟಿಪ್ಪಣಿ:—** ಇದು ಬೌದ್ಧ ಸಾಹಿತ್ಯದೊಳಗಿನ ಒಂದು ಕಥೆಯ ಅನುವಾದ. 'ಚಯನಿಕಾ' ಎಂಬ ಬಂಗಾಲಾ ಭಾಷೆಯ ಕವನ ಸಂಗ್ರಹದಲ್ಲಿಯೂ ಈ ಕಥೆ 'ಅಭಿಸಾರ' ಎಂಬ ಶಿರೋಲೇಖದೊಡನೆ ಪ್ರಕಟವಾಗಿದೆ.

ಕೊನೆಯವೆರಡೇ ಕವಿತೆಗಳಲ್ಲಿ ಇಡಿಯ ಕಥಾಸಾರವೂ ಅದರಿಂದ ಬೋಧವಾಗುವ ನೀತಿಯೂ ಅಡಕವಾಗಿವೆ: ವಾಸವದತ್ತೆಯು ಸೆರಗಿನಲ್ಲಿ ದೀಪವನ್ನು ಮುಚ್ಚಿಕೊಂಡು ತನ್ನ ಪ್ರಿಯನ ಬಳಿಗೆ ಹೋಗಲು ಹೊರಡುವದೆಂದರೆ ಮನಸ್ಸು ಜ್ಞಾನವನ್ನು ಮರೆಮಾಡಿ ಇಂದ್ರಿಯ ಸುಖಕ್ಕೆ ಎಳಸುವದು; ಉಪಗುಪ್ತನನ್ನು ತುಳಿಯುವದೆಂದರೆ ಅನೀತಿಯ ಆಚರಣೆಯಿಂದ ಆಪತ್ತಿಗೆ ಗುರಿಯಾಗಲು ಒಮ್ಮೆ ಜ್ಞಾನೋದಯವಾಗುವದು; ಮತ್ತೆ ಕಾಮವಾಸನೆಗಳೇ ಮೊದಲಾದ ದುರ್ವಿಚಾರಗಳೇ ಮುಂದೆ ಬರುವದು,—ಇತ್ಯಾದಿ ಆಧ್ಯಾತ್ಮಿಕ ವಿಚಾರಗಳನ್ನು ಈ ಒಂದು ಸಾಮಾನ್ಯ ಪ್ರಾಪಂಚಿಕ ಘಟನೆಯಿಂದ ನಿರೂಪಿಸಲಾಗಿದೆ.

**ಶಬ್ದಕೋಶ:** ತಿಮಿರ–ಕತ್ತಲೆ. ಚೀನಾಂಬರ–ರೇಶಿಮೆಯ ಬಟ್ಟೆ. ತನುಚ್ಛವಿ–(ತನು+ಛವಿ) ಶರೀರ ಕಾಂತಿ. ದುರ್ಧರ–ಸಹಿಸಲಾಗದ. ಲತಾಂತ–ಹೂವು. ನಾಡೆ–ಚೆನ್ನಾಗಿ. ಯತಿತಿಲಕ–ಸಂನ್ಯಾಸಿಗಳಲ್ಲಿ ಶ್ರೇಷ್ಠ. ಬಿಸಜಾಂಬಕ–(ಬಿಸ+ಜ+ಅಂಬಕ) ಕಮಲದಂತಿರುವ ಕಣ್ಣು. ವಿಧಿವಿಲಾಸ–ದೈವಗತಿ. ಕಂತುಪಿತ (ಕಂತು–ಮನ್ಮಥ) ಕೃಷ್ಣ, ದೇವರು. ಬುಧವರ–ಜ್ಞಾನಿಗಳಲ್ಲಿ ಶ್ರೇಷ್ಠ. ಶೌಚಾಚಾರ–ಶುಚಿಯಾದ (ಪವಿತ್ರವಾದ) ನಡತೆ.

## ಪ್ರಶ್ನೆಗಳು

(೧) ವಾಸವದತ್ತೆಯ ಕಥೆಯನ್ನು ಸಂಗ್ರಹವಾಗಿ ಹೇಳಿರಿ.

(೨) ಉಪಗುಪ್ತನ ಉತ್ತರದಿಂದ ವಾಸವದತ್ತೆಯ ಮನಸ್ಸಿನಲ್ಲಾದ ಪರಿಣಾಮವನ್ನು ವಿವರಿಸಿರಿ. (ಪ. ೭)

(೩) ವಸಂತ ಋತುವಿನ ವನವರ್ಣನೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ. (ಪ. ೮–೯)

(೪) ಉಪಗುಪ್ತನ ಪ್ರಯಾಣದ ವರ್ಣನೆಯ ಪದ್ಯದ ಅಲಂಕಾರವನ್ನು ನಿರೂಪಿಸಿರಿ. (ಪ. ೧೧)

(೫) ಕೊನೆಯವೆರಡು ಪದ್ಯಗಳ ಸರಳಾನುವಾದವನ್ನು ಬರೆಯಿರಿ.

# ಕವಿ ರವೀಂದ್ರರ ಒಂದು ಗೀತ

ಮುನಿವರರು ಕುಲಕುಟುಂಬವ ತೊರೆದು ಸಂನ್ಯಾಸಿ।
ಯೆನಿಸಿದೊಡೆ ಮೋಕ್ಷವಾಗದು ದೇವ ವಿಧವಿಧದ।
ಮನಸಿನಾನಂದ ಬಂಧನದೊಳೇ ಸ್ವಾತಂತ್ರ್ಯಸೌಖ್ಯಮಂ ಪಡೆವೆನಾನು॥
ತನುವೆಂಬ ಮಣ್ಣಿನೀ ಘಟದೊಳಗೆ ತರತರದ।
ಗುಣಗಂಧವರ್ಣಯುತವಾಗಿ ರಂಜಿಸುವಮೃತ।
ವನೆ ತುಂಬಿ ಮನವಾರೆ ಕುಡಿಯೆಂದು ನೀನರ್ಪಿಸಿಹೆಯೆನಗೆ ದೇವದೇವ॥
ಧರೆಯು ಬೆಳಗುವ ನಿನ್ನ ದೀಪದಿಂದೆನ್ನಖಿಲ।
ಕಿರುದೀಪಗಳ ಬೆಳಗಿ ನಿನ್ನ ಮಂದಿರದೊಳಗೆ।
ಇರಿಸಿ ಬೆಳಗಿಸಿ ದೀಪಮಾಲೆಯಂ ವಿರಚಿಸುತಲಾನಂದವಡೆವೆನಾನು॥
ಹೊರಗಣೆಂದ್ರಿಯ ಮಾರ್ಗಗಳ ನಿರೋಧಿಸಲಾರೆ।
ಪರಿಪರಿಯ ಶಬ್ದದೊಳ್ ಸ್ಪರ್ಶದೊಳ್ ರೂಪದೊಳ್।
ಉರುತರದ ರಸಗಂಧದಾಸ್ವಾದದೊಳ್ ನಿನ್ನನೇ ಕಾಂಬೆ ದೇವ ದೇವ।
ಇಂತೆನ್ನ ಸುಖದ ಕನಸುಗಳೆಲ್ಲವುಂ ದಹಿಸಿ।
ಸಂತಸದ ಸುಜ್ಯೋತಿಯುದಯವಾಗಲಿ ದೇವ।
ಸಂತತಂ ತವಚರಣ ಭಕ್ತಿಯಲೆ ಪರಿಣಮಿಸಲೆನ್ನಖಿಲ ಮನದ ಬಯಕೆ॥

**ಟಿಪ್ಪಣೆ:** ಇದು ಕವಿ ರವೀಂದ್ರರ ನೈವೇದ್ಯವೆಂಬ ಕಾವ್ಯದೊಳಗಿನ ಒಂದು ಗೀತದ ಅನುವಾದ. ಕವಿ ರವೀಂದ್ರರ ಗೀತಾಂಜಲಿಯ–ಬಹುಶಃ ಅವರ ಎಲ್ಲ ಗೀತಗಳ–ಸಾರವು ಈ ಒಂದೆ ಗೀತದಲ್ಲಿ ಅಡಕವಾಗಿದೆಯೆಂದು ಹೇಳುವದುಂಟು. ತ್ಯಾಗ–ಯೋಗಗಳಲ್ಲಿ ಮೋಕ್ಷವಿಲ್ಲ, ಅದು ಕರ್ಮದಲ್ಲಿಯೇ ಇದೆ, ಎಂಬುದೇ ಈ ಕವಿತೆಯ ರಹಸ್ಯ. ಮತ್ತು ಕರ್ತವ್ಯತತ್ಪರನಾಗಿ ಸತ್ಕರ್ಮನಿರತನಾದವನ ಕಾರ್ಯಗಳೆಲ್ಲವೂ ದೇವಸೇವೆ. ಆ ಬಗೆಯ ದೇವತಾಸೇವೆಯಿಂದಲೇ ಇಷ್ಟಸಾಧನೆಯಾಗುವದು ಎಂಬುದೇ ಇದರ ತಾತ್ಪರ್ಯ.



# ೭. ಪ್ರತಿಧ್ವನಿ



ಗಿರಿಯ ಕಂದರದಲ್ಲಿ ಸೃಷ್ಟಿಯ ।
ಸಿರಿಯ ನೋಡುತ ಕೊಳಲನೂದುತ ।
ಪರಮ ಹರುಷದೊಳಿರುವ ಗೋಪಾಲಕರ ಬಾಲಕನು ॥
ಹರುಷದಿಂದೆಳೆಹುಲ್ಲ ಮೇಯುತ ।
ಚರಿಸುತಿರೆ ಗೋವುಗಳು ದೂರದಿ ।
ಕರದ ಕೊರಡಿಯ ( ಚಾಟಿಯ ) ಬಡಿದು 'ಚಟಪಟ' ಹಾಡ
ತೊಡಗಿದನು ॥ ೧ ॥

"ಗಿರಿಯ ನೀಂ ಕಿರುಬೆರಳಿನಗ್ರದಿ" †
"ಗಿರಿಯ ನೀಂ ಕಿರುಬೆರಳಿನಗ್ರದಿ" ।
ತಿರುಗಿ ಕೇಳಿಸಿತೊಡನೆಯಾನುಡಿ ಗಿರಿಯ ಶಿಖರದಲಿ ॥
'ಧರಿಸಿಯೆಮ್ಮನು ಪೊರೆದ ದೇವನೆ' । †
'ಧರಿಸಿಯೆಮ್ಮನು ಪೊರೆದ ದೇವನೆ' ।
ತಿರುಗಿ ಕೇಳಿಸಿತೊಡನೆಯಾನುಡಿ ಮೊದಲಿನಂದದಲಿ ॥ ೨ ॥

ಆಡಿದಂತೆಯೆ ತಿರುಗಿಯಾಡುವ ।
ಗೂಢತತ್ವವನರಿಯಲಾರದೆ ।
ಗಾಢಕೋಪದೆ ಮರಳಿ ಕೇಳ್ದನು ಗೋಪ ಬಾಲಕನು ॥
'ಮೂಢ ನೀನಾರೇತಕಣಕಿಪೆ' ।
'ಮೂಢ ನೀನಾರೇತಕಣಕಿಪೆ' ।
ಗಾಢತರ ಕೋಪದಲಿ ಕೇಳಿಸಿತೊಡನೆ ಮಾರ್ನುಡಿಯು ॥ ೩ ॥

---

† ಈ ಚರಣಗಳನ್ನು ಒಂದರ ಮುಂದೊಂದು ಹೊಂದಿಸಿ, 'ಗಿರಿಯ ನೀಂ ಕಿರುಬೆರಳಿನಗ್ರದಿ–ಧರಿಸಿಯೆಮ್ಮನು ಪೊರೆದ ದೇವನೆ' ಎಂದು ಓದಬೇಕು.

ನೆರಹಿ ಗೋವ್ರಗಳನ್ನು ಮನೆಗೈ ।
ತರುತ ತಂದೆಗೆ ಪೇಳ್ದನೆಲ್ಲವ ।
ಗಿರಿಯ ಶಿಖರದೊಳಡಗಿ ನಿಂತಿಹರೆನ್ನ ವೈರಿಗಳು ॥
ಪರಿಪರಿಯಲೆನ್ನನ್ನು ನಿಂದಿಸು ।
ತಿರುವರಪರನು ನೀನು ದಂಡಿಸ ।
ದಿರಲು ಪೋಗೆನು ನಾಳೆ ದನಗಳನಲ್ಲಿ ಮೇಯಿಸಲು ॥ ೪ ॥

ಮಗನ ಮಾತನು ಕೇಳಿ ಗೋಪನು ।
ನಗುತಲೆಂದನು ಕಂದ ಕಂದರ- ।
ದಗಡು ವೈರಿಯ ದಂಡಿಸಲು ನೀನಳುವೆ ನಿಶ್ಚಯವು ॥
"ನಗೆಯ ಮಾತಲ್ಲಯ್ಯ" ಎನೆ, ಮಗು, ।
ನಗೆಯ ಮಾತೇನಿರುವದಿದರೊಳು ।
ಮಗುವೆ ನಿನಾಡಿರುವ ನುಡಿಗಳೆ ಮರಳಿ ಕೇಳಿದುವು ॥ ೫ ॥

ನಿನಗೆ ನಿನೇ ವೈರಿ ನೀನೇ ।
ನಿನಗೆ ಹಿತಚಿಂತಕನು ಲೋಕದಿ ।
ನಿನಗೆ ಸುಖದುಃಖಗಳನೀಯುವರನ್ಯರೆನ್ನದಿರು ॥
ಜನರೊಳಾಡುವ ನುಡಿಯು ಪಡಿನುಡಿ ।
ಜನರೊಳೆಸಗುವ ಕೃತಿಯು ಪ್ರತಿಕೃತಿ ।
ನಿನಗೆ ದೊರೆವುವು ಗಿರಿಯ ಶಿಖರದ ನುಡಿಯ ಗೂಢವಿದು ॥ ೬ ॥

ಟಿಪ್ಪಣಿ:—ಇದೊಂದು ಇಂಗ್ಲಿಷು ಕವಿತೆಯ ಅನುವಾದವು.

ಶಬ್ದಕೋಶ:—ನೆರಹು-ಕೂಡಿಸು. ಗೋಪ- (ಗೋ+ಪ) ; ಭೂಪ, ಅವನಿಪ ಇವನ್ನು ಹೋಲಿಸಿ ನೋಡಿರಿ. ಅಗಡು-ದಿಟ್ಟ, ಪುಂಡ. ಪಡಿ-ತ್ಸ-ಪ್ರತಿ.

## ಪ್ರಶ್ನೆಗಳು

೧. ಪ್ರತಿಧ್ವನಿಯ ರಹಸ್ಯವೇನು ? ನೀವು ಅದನ್ನು ವ್ಯವಹಾರದಲ್ಲಿ ಹೇಗೆ ಉಪಯೋಗಿಸಿಕೊಳ್ಳುವಿರಿ ?

ಮಹಾಕವಿ

## ಲ. ಶೇಕ ಸಾದಿಯ ವಚನಗಳು.

(೧)

**ಹ**ರಕು ಕಂತೆಗೆ ಕಂತೆಯನು ಹೊಲಿದು ಹೊದೆಯುತಿಹ ।
ಪರಮ ದಾರಿದ್ರ್ಯಕ್ಕೆ ನೆಲೆಯೆನಿಪ ಸಂನ್ಯಾಸಿ ।
ವರನು ಬಹು ಕಷ್ಟದಲಿ ತಾಳ್ಮೆಯಿಂದಿರುತಿರಲು ನುಡಿಯುತೀವಾಕ್ಯಗಳನು ॥
"ಹರಕು ಕಂಬಳಿ ಮುರುಕು ರೊಟ್ಟಿ ತಂಗ(ಗೂ)ಳ್ಗಳೇ ।
ಪರಮ ಸುಖಕರವೆನಗೆ, ಬಡತನದ ಭಾರವನು ।
ಹರುಷದಲಿ ತಾಳುವೆಂ, ತಾಳಲಾರೆನು ಪರರ ಕೊಡುಗೈಯ ಭಾರವನ್ನು" ॥೧॥

**ಬ**ಡತನದೆ ಬಳಲುವಾತನ ದೈನ್ಯವನು ಕಂಡು ।
ನುಡಿದನೊಬ್ಬನು "ಸಾಧುವರನೆ ನೀಂ ಬಹುಕಷ್ಟ ।
ಪಡಲೇತಕೀ ನಗರದೊಳಗೊಬ್ಬ ಧನವಂತ ಗುಣವಂತ ಮಾನವಂತ ॥
ಕೊಡುಗೈಯ ದೊರೆಯಿಹನು ನೀನವನ ಬಳಿಗೈದೆ ।
ಕೊಡುವನತ್ಯಾನಂದದಿಂದ ಬಹುಧನಕನಕ ।
ದುಡುಗೊರೆಯ ಬಡವರಿಗೆ ಬೇಡಿದುದ ಕೊಡುತಿಹನು ನಡೆ" ಯೆನಲು
ನುಡಿದನವನು ॥ ೨ ॥

**ತ**ನ್ನ ಬಡತನದ ಬಾಳ್ಕೆಯನನ್ಯ ಜನರೊಡನೆ ।
ಬಿನ್ನವಿಪ ಕಷ್ಟದಿಂ ದಾರಿದ್ರ್ಯತಾಪದಲಿ ।
ಬನ್ನ ಬಡುತಸುವ ಬಿಡುವುದೆ ಲೇಸು, ಸುಖಕೆಂದು ಯಾಚಿಪರೆ
ದೈನ್ಯದಿಂದ ॥
ಅನ್ನಿಗರು ಕೊಟ್ಟ ಪೀತಾಂಬರದ ತೊಡುಗೆಯಿಂ ।
ತನ್ನ ಕಂತೆಯ ಹೊಲಿದು ಹೊದೆಯುವುದೆ ಸುಖಕರವು ।
**ಅನ್ನಿಗನ ಹೆಗಲೇರಿ ನಂದನಕೆ ತೆರಳುವುದು ಬಹು ಕಷ್ಟ !**
**ನರಕ ಸುಖವು ॥ ೩ ॥**

( ೨ )

**ಉ**ಣ್ಣುವನು ತಡವಾಗಿ ಜಾಣನಾದವನಿಳೆಯೊ ।
ಳುಣ್ಣುವನು ಹಸಿವಿನರ್ಥವ ಸುವ್ರತಾಚಾರಿ ।
ಯುಣ್ಣುವನು ಜೀವನಕ್ಕಾಧಾರಮಪ್ಪಂತೆ ಸಜ್ಜನಂ, ತರುಣನರಸು ॥
ಉಣ್ಣುವನು ತನಗೊಪ್ಪುವನ್ನವನು, ವೃದ್ಧತಾ ।
ನುಣ್ಣುವನು ಸವಿಯಾಗಿ, ಕೂಳಕಾಣದ ಖೋಡಿ ।
ಯುಣ್ಣುವನು ಮೂಗಿನಲಿ ನುರಗುಳು ಬೀಳುವಪ್ಪಾಸೆಯಿಂದ ॥ ೪ ॥

**ಪೆ**ರರುಂಬರೆಂಬ ಮತ್ಸರದಿಂದ ತನ್ನಳವ ।
ನರಿಯದುಣ್ಣುವ ನೀಚನನುದಿನವು ಬಳಲುವನು ।
ಹರಿವುದೋ ಹೊಟ್ಟೆಯೆಂದುಂಡದಿನ ಮರುದಿವಸ ಕೂಳಿರದೆ ಹಸಿವಿನಿಂದ ॥

( ೩ )

**ಮೂ**ಢನನು ಸುಜ್ಞಾನಿ ಜಯಿಸಿದರೆ ಫಲವೇನು ? ।
ಮೂಢನಾಜ್ಞಾನಿಯನು ಜಯಿಸಲೇನಾಶ್ಚರ್ಯ, ।
ಹಾಡುವುದೆ ಕೋಗಿಲೆಯು ಕಾಗೆಯೊಡನಿರ್ದಾಗ, ಕಲ್ಲು ರತ್ನವ ನೀಳದೇ ॥
ಪೀಡಿಸಲು ದುರ್ಜನರು ಸುಜನರ್ಗೆ ಚಿಂತೆಯೇ ? ।
ಕಾಡುಗಲ್ ಪೊಂದಳಿಗೆಯನ್ನೊಡೆದ ಮಾತ್ರಕೇಂ ।
ಕಾಡುಗಲ್ಲಿನ ಬೆಲೆಯು ಹೆಚ್ಚುವುದೆ? ಚಿನ್ನವದು ಕೀಳೆನಿಸಿ
ಕೆಡುವುದುಂಟೇ ॥ ೬ ॥

**ಟಿಪ್ಪಣಿ**— ಪರ್ಶಿಯನ್ ಮಹಾಕವಿಯ "ಗುಲಿಸ್ತಾನ" ಎಂಬ ಮಹಾಕಾವ್ಯದೊಳಗಿನ ಕವಿತೆಗಳಿವು.

**ಶಬ್ದಕೋಶ**—ಕಂತೆ (ತ್ಸ) ಕಂಥಾ-ಚಿಂದೆ. ಕೊಡುಗೈ ( ಕೊಡುವ ಕೈ ) ದಾನಮಾಡುವ ಕೈ. ಕೊಡುಗೈಯದೊರೆ ದಾನಶೂರನಾದವ. ಉಡುಗೊರೆ-ಉಡುಗೆಯ ಹೊರೆ. ನಂದನ-ನಂದನವನ, ಸ್ವರ್ಗ. ತಡವಾಗಿ-ಚೆನ್ನಾಗಿ ಹಸಿವೆಯಾಗುವವರೆಗೂ ತಡೆದು.

## ಪ್ರಶ್ನೆ

ಮೇಲಿನ ಮೂರು ಕವಿತೆಗಳಿಗೆ ಬೇರೆ ಬೇರೆ ಹೆಸರುಕೊಟ್ಟು ಅವುಗಳ ಸಾರ್ಥಕತೆಯನ್ನು ವಿವೇಚಿಸಿರಿ.



# ೯. ಕೃಪಣ.

**ಬೀ**ದಿಬೀದಿಗಳಲ್ಲಿ ತಿರುಗಿ ಭಿಕ್ಷೆಯ ಬೇಡು ।
ಐದುತಿರೆ ಹೇಮಮಯರಥದೊಳಗೆ ತೆರಳುತಿಹ ।
ಮೇದಿನೀಪತಿಯಂತೆ ದಿವ್ಯವಸ್ತ್ರಾಭರಣಕಾಂತಿಯಿಂದೊಡಗೂಡಿ ಮೆರೆವ ॥
ಮೋದದಾಯಕ ದಿವ್ಯಮೂರ್ತಿಯಂ ಕಾಣಲೆನ ।
ಗಾಢ ಪರಮಾನಂದವೇನೆಂದು ಬಣ್ಣಿಸಲಿ ।
ಮಾಧವನ ಮೂರ್ತಿಯೇ ಪ್ರತ್ಯಕ್ಷವಾದಂತೆ ತೋರಿದುದು
ಮನಸಿನೊಳಗೆ ॥ ೧ ॥

**ಮ**ನೆಯಿಂದ ಬರುವಾಗಲಾವನಿದಿರೈದಿದನೊ ।
ಘನಮಹಿಮನನು ಕಂಡೆನಿಂದೆನಗೆ ದಿನದಂತೆ ।
ಮನೆಮನೆಯ ತಿರುಗಿ ಹಿಡಿಹಿಡಿ ಕಾಳಕೂಡಿಸುವ ಸಂಕಟವು ತಪ್ಪಿತಾಹಾ! ॥
ಧನಧಾನ್ಯಗಳ ಸೂರೆಗೈಯಬಹುದಿವನಾರ್ತ ।
ಜನಕೀತನಂ ಸೇರಿ ಸಂಪದವ ಪಡೆವೆನಂ ।
ದೆನುತ ಮನದಲಿ ಮುದದಿ ಯೋಚಿಸುತಲಿರ್ದೆನರೆಗಳಿಗೆ
ನಾನನಿತರೊಳಗೆ ॥ ೨ ॥

**ದಿ**ವ್ಯತೇಜಿಗಳು ಮಣಿಹೇಮಮಯರಥವನಾ ।
ದಿವ್ಯಮೂರುತಿ ಸಹಿತ ತಂದೆನ್ನ ಮುಂದೆ ನಿಲೆ ।
ದಿವ್ಯತೇಜಃಪುಂಜಮೂರ್ತಿಯಂ ಕಂಡೆರಗಿ ವಿನಯಭಯಭಕ್ತಿಯಿಂದ ॥
ಸವ್ಯಸಾಚಿಯ ಮಿತ್ರನನು ನೆನೆಯುತಿರಲವನು ।
ದಿವ್ಯಕರಯುಗಳವನು ಜೋಡಿಸುತ ಪೇಳ್ದನೀ ।
ಭವ್ಯರತ್ನಾಭರಣಸಂಪದಗಳೆನಗೆ ಸೇರಿದುವಲ್ಲ ಭಿಕ್ಷೆಯನು ನೀಡು
ದಯದೆ ॥ ೩ ॥

**ಪ**ರಮಪುರುಷನೆ ನೀನು ಧನಧಾನ್ಯ ಸಂಪದವ ।
ಕರುಣಿಸುವೆಯೆನಗೆಂದು ಮನದೆ ಭಾವಿಸುತಿರ್ದೆ ।
ಸರಿಯೆನ್ನೈ ನಿನ್ನ ಮಾತಿನ ಗೂಢವನು ಮೂಢಮತಿಯೆ ನಾಂ
ಕರುಣಿಸೊಲಿದು ॥

ಧರೆಯನಾಳುವ ಚಕ್ರವರ್ತಿಯೆಂತೆಸೆವ ನಿನ ।
ಗಿರುವುದೇ ದಾರಿದ್ರ್ಯದೌರ್ಭಾಗ್ಯಗಳ ಬಾಧೆ ।
ಯಿರುವುದೇನೀಯೆನ್ನ ಹರಕು ಜೋಳಿಗೆಯೊಳಗೆಭಿಕ್ಷೆಯನು ನೀಡೆ ನಿನಗೆ ॥೪॥
ಬಡವನನು ಬೇಡಿ ಕಾಡುವುದಾವನೀತಿಯೈ ।
ಬಡವರೊಡೆಯನೆ ಸಾಗು ಸಾಗಯ್ಯ ಮುಂದಕ್ಕೆ ।
ಕೊಡಲಾರದಿರೆ ಮರಳಿ ಬೇಡಿ ಕಾಡುವ ನಿನ್ನ ಕಪಟವನು ತಿಳಿಯೆನೆಂದು ॥
ನುಡಿದೊಡಂ, ನಿಷ್ಠುರದಿ ಬೈದೊಡಂ, ದೈನ್ಯವನು ।
ಬಿಡದೆ ಬೇಡಿದನಾತನದ ನೋಡಿ ಬೇಸತ್ತು ।
ಕಡೆಗೆ ಜೋಳಿಗೆಯಲ್ಲಿ ಕೈಯಿಕ್ಕಿ ನೀಡಿದೆನು ನಾಲ್ಕಾರು ಕಾಳುಗಳನು ॥೫॥
ಪೋಗಿ ಬಹೆನಣ್ಣ ನೀಂ ನೀಡಿದೀ ಕಾಳುಗಳ ।
ನಾಗಶಯನನ ಬಳಿಗೆ ಕೊಂಡೊಯ್ದು ಸಲ್ಲಿಸುವೆ ।
ಪೋಗು ನಿನ್ನಾಲಯಕೆ ಕೊಡಲಾರದನ ಬೇಡಿ ಕಾಡಿದೆಂ ಕ್ಷಮಿಸು ದಯದಿ ॥
ಹೀಗೆಂದು ಸಾರಥಿಗೆ ಸಂಜ್ಞೆಯನು ಮಾಡಿದೊಡೆ ।
ಸಾಗಿದುದು ಮಣಿರಥವು ಬಂದ ದೆಸೆಯಿಂದಲೇ ।
ಪೋಗಿ ಸೇರಿದೆನೆನ್ನ ಗುಡಿಸಲನು ವಿಧವಿಧದಿ ಯೋಚಿಸುತ ಗೂಢಕೃತಿಯ ॥
ಸಾರೆ ದಿನಮಣಿ ಪಶ್ಚಿಮಾಂಬುಧಿಯ ಮೇರೆಯಂ ।
ಸಾರೆ ಖಗಮೃಗ ತಮ್ಮ ತಮ್ಮಾಲಯಂಗಳನು ।
ತಾರಕಾಪತಿ ಮೂಡಣಾಗಸಗ ಶಿಖರದೊಳ್ ಮೆಲ್ಲನಡಿಯಿಡುತ ಬರಲು ॥
ವೈರಿನೃಪನಂ ಕ್ರೂರಕರದಿಂದ ಕೊರಗಿಸಿದ ।
ವೀರನನುಚರರನಲ್ಲಿರಹೇಳಿ ಮರಳಿದೊಡ ।
ನೇರಿಬಹ ನೃಪನಂತೆ ತೋರಿದಂ ಸೃಷ್ಟಿಯೊಳ್ ಸ್ಥಿರವಾದ ಶಾಂತಿಯುಂಟೇ ॥
ಮುರುಕು ಗುಡಿಸಲು ಸೇರಿ ಪಣತೆಯಲಿ ಬತ್ತಿಯನು ।
ಸರಿಮಾಡಿ ತಿರಿದು ತಂದಕ್ಕಿಯನು ಗಡಿಗೆಯಲಿ ।
ಸುರಿವಾಗ ಕಂಡೆನಾಂ ಮಿನುಗುತಿಹ ನಾಲ್ಕಾರು ಬಂಗಾರದಕ್ಕಿಗಳನು ॥
ಹರಿಯೆ ಬೇಡಲು ಕೊಡಲು ಮನವೊಲಿದಾಯ್ತೆನಗೆ ।
ಅರಿಯನೈ **ಕೊಟ್ಟು ಪಡೆ**ಯೆಂಬುದನು, **ಭವಕೆ ನಾಂ** ।
**ಬರುವಾಗ ಕೊಟ್ಟು ಬಂದಿರಲಿಲ್ಲ, ಬಂದೀಗ ಕೊಡಲಿಲ್ಲ, ಕೃಪಣ**
ನಾನೈ ॥ ೮ ॥

ಟಿಪ್ಪಣಿ: ಕವಿ ರವೀಂದ್ರರ ಒಂದು ಕವನದ ಆಧಾರದಿಂದ ಬರೆದ ಕವಿತೆಗಳಿವು.

ಶಬ್ದಕೋಶ: ಹೇಮಮಯ— (ಹೇಮ-ಬಂಗಾರ) ಬಂಗಾರದಿಂದ ಮಾಡಿದ. ಆರ್ತಜನ ಸಂಕಟದಲ್ಲಿರುವ ಜನರು. ತೇಜಿ—ಕುದುರೆ. ಸವ್ಯಸಾಚಿಯಮಿತ್ರ—(ಸವ್ಯಸಾಚಿ-ಅರ್ಜುನ) ಅರ್ಜುನನ ಸ್ನೇಹಿತ; ಕೃಷ್ಣ. ನಾಗಶಯನ-ಸರ್ಪದ ಮೇಲೆ ಮಲಗಿದವ, ವಿಷ್ಣು, ದೇವರು.

## ಪ್ರಶ್ನೆಗಳು

೧. ಈ ಕವಿತೆಯ ಕಥೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ. ಮತ್ತು ಇದರ ರಹಸ್ಯವನ್ನು ಹೇಳಿರಿ.

೨. ಚಂದ್ರೋದಯದ ವರ್ಣನೆಯನ್ನು ವಿವರಿಸಿರಿ.

೩. ಈ ಕವಿತೆಯನ್ನು ಓದಿದ ನೀವು ಯಾರಿಗೆ ಕೃಪಣನೆನ್ನುವಿರಿ?




## ೧. ಕರ್ತವ್ಯವಿಚಾರ

ಜನರ ನುತಿಯನು ಬಯಸಿಯುರಿಯಲಿ।
ತನುವಸೀಡಾಡಿದೊಡೆ ನಿನ್ನಯ।
ಮನದ ಸಾಧನೆ ಸಾಧ್ಯವಪ್ಪುದೆ? ಮೂಢ ಮಾನವನೇ॥
ಮನುಜನಾತನ ಮನಕೆ ಮೆಚ್ಚುವ।
ತನಗೆ ಹಿತಕರವೆನಿಸಿಪ ಕಾರ್ಯದಿ।
ನಿನಗೆ ಮನವೊಲಿವಂತೆ ನುತಿಪನು ತಿಳಿದು ನಡೆಯಿದನು. ॥೧॥
ಜಗದೊಡೆಯನಿತ್ತಿರುವ ಬುದ್ಧಿಯ।
ಜಗಕೆ ತೋರುವ ಶುದ್ಧಮನದಲಿ।
ಜಗದ ಹಿತಸಾಧನೆಯೆ ನಿನ್ನಯ ಬಯಕೆಯಾಗಿರಲಿ॥

(ನೀನು ಮಾಡುವ ಎಲ್ಲ ಕೆಲಸಗಳಲ್ಲಿ ನಿನ್ನ ಬುದ್ಧಿಶಕ್ತಿಯನ್ನು ತೋರಿಸುವುದು, ಲೋಕ ಕಲ್ಯಾಣ, ಇವೇ ನಿನ್ನ ಇಚ್ಛೆಯಾಗಿರಬೇಕು.)

ಜಗದ ಜನರನು ತೃಪ್ತಿಗೊಳಿಪುದು।
ಜಗದ ಪಾಲಕಗಾಯ್ತುಸಾಧ್ಯವು।
ಜಗದ ಜನರಾ ಸ್ವಾರ್ಥ-ಸಾಗರವೀಸಲಸದಳವು ॥ ೨ ॥

ಸಾಗರದಿ ಜಲರಾಶಿಯಿರಲೇಂ?।
ಹೋಗಿತುಂಬುವ ಕೊಡಕೆಯನುಗುಣ।
ವಾಗಿ ಜಲವದರಲ್ಲಿ ಬರುವುದು ಹೆಚ್ಚು ಬಹುದೇಸು?॥
ಹೀಗೆಯೇ ನಿನ್ನುಚ್ಚಗುಣಗಳಿ।
ಗಾಗಿ ಲೋಕದ ಜನರ ಭಾಸನೆ।
ಯಾಗುವುದು ನೋಡುವರ ದೃಷ್ಟಿಯ ಶಕ್ತಿಯಿದ್ದಂತೆ ॥ ೩ ॥

ಧರ್ಮಸತ್ಯಾಚರಣೆಗಳ ನಿಜ।
ಮರ್ಮವೆಲ್ಲರುಮೆಲ್ಲಿ ಬಲ್ಲರು
ಕರ್ಮವೇ ಧರ್ಮಕ್ಕೆ ಸತ್ಯಕೆ ಸಾಕ್ಷಿಯಾಜನರ॥

**(ಮರ್ಮವ+ಎಲ್ಲರುಂ+ಎಲ್ಲಿ ಬಲ್ಲರು; ಆ ಜನರ ಸತ್ಯಕ್ಕೂ ಧರ್ಮಕ್ಕೂ ಅವರ ಕರ್ಮವೇ ಸಾಕ್ಷಿ)**

## ೨. ವ್ಯವಹಾರ ವಿಚಾರ

ನಾಡಿನಲಿ ನೂರೆಂಟು ಜನರೊಡ।
ನಾಡಿ ಬಾಳುವೆ ಮಾಳ್ಪುದಾದೊಡೆ।
ನೋಡಿಕೊಳ್ ವ್ಯವಹಾರಜಾಣ್ಮೆಯ ಗೂಢತತ್ವಗಳ॥
ಮಾಡಲಾಗದು ದುಷ್ಟಕೃತ್ಯವ।
ನಾಡಲಾಗದು ದುಷ್ಟವಚನವ।
ನೋಡಿ ತಿಳಿದಿರಬೇಕು ದುಷ್ಕೃತಿ ದುಷ್ಟವಚನಗಳ ॥ ೧ ॥

ದುಷ್ಟರಾಡುವ ಧರ್ಮವಚನವು।
ದುಷ್ಟಸರ್ಪದ ಹೆಡೆಯ ರತ್ನವು।
ಶಿಷ್ಟರಾದವರದಕೆ ಮೋಹಿಸಲಾಗದೆಂದೆಂದು॥

ಶಿಷ್ಟರನು ನೆರೆ ಪೋಸಗೊಳಿಸುತ ।
ದುಷ್ಟಕೃತ್ಯಗಳನ್ನು ಮುಚ್ಚಲು ।
ದುಷ್ಟರಾದವರಾಡುತಿರುವರು ನೀತಿವಚನಗಳ ॥ ೨ ॥
**ಸೂ**ರೆಗೈ ಸವಿಮಾತಿನಮೃತವ ।
ಸಾರುತಿರು ಸಜ್ಜನರ ಕೀರ್ತಿಯ ।
ತೋರು ಸದ್ಗುಣಗಣವ ಲೋಕಕೆ ನಿನ್ನ ನಡತೆಯಲಿ ॥
ಆರೊಳಾಗಲಿ ನಿನ್ನ ಗುಟ್ಟನು ।
ತೋರಿ ಮೈಮರೆತಿರಲು ಸಲ್ಲದು ।
ನೇರದಿವ್ಯವಹಾರಚತುರರ ನೆರೆಯನೆಂದೆಂದು ॥ ೩ ॥
**ನೀ**ಚಕೃತ್ಯವ ಮಾಡಲೆಳಸದೆ ।
ನೀಚಮಾರ್ಗವ ನೋಡಿ ತಿಳಿದಿರೆ ।
ನೀಚರನು ಪ್ರತಿಬಂಧಿಸಲು ಬಹು ಸುಲಭವಾಗುವುದು ॥
ನೀಚಭಾವನೆಯಿಂದ ನಿಂದಿಪ ।
ನೀಚಜನರಾ ನೀಚವಚನವು ।
ನೀಚ ನಾಯಿಯ ದನಿಗೆ ಸಮವೆಂದೆಣಿಸಿ ನಡೆ ಜಗದೆ ॥ ೪ ॥

## ೧೧. ಮಾತೃಭೂಮಿ.

**ಮಾ**ನದೊಳವಮಾನದಲಿ ಪತನೋ ।
ತ್ಥಾನ ಸುಖದುಃಖಗಳ ಸಮಯದಿ ।
ಮಾನುಷತ್ವವ ಕಾದುಕೊಳ್ಳಲು ಶಕ್ತಿಯನ್ನಿತ್ತು ॥
ನೀನೆ ಕಾವುದು ಪುತ್ರವತ್ಸಲೆ ।
ಧ್ಯಾನಿಪೆಂ ಸ್ನೇಹಾರ್ತ ಜನನಿಯೆ ।
ಮಾನವತಿ **ಕರ್ಣಾಟಮಾತೆ**ಯೆ ನಿನ್ನ ಬಾಲಕರ ॥ ೧ ॥
**ಮ**ನದ ಮೋಹದಿ ಮುದ್ದುಗುವರರ ।
ಮನೆಯೊಳಿಟ್ಟಾಡಿಸುತ ನಲಿಯದೆ ।
ತನತನಗೆ ತಕ್ಕಂತೆ ಮಾನ್ಯತೆವಡೆಯೆ ಜಗದೊಳಗೆ ॥

ಅನುಪನೀಯಯೌ, ನಿನ್ನ ಸಂತತಿ।
ಯನುದಿನವು ಬಾಲ್ಯದಲೆ ಬಾಳದೆ।
ಜನತೆಯೊಳ್ ನಿಜಬಾಳ್ಕೆಗುಚಿತಸ್ಥಳವ ಶೋಧಿಸಲಿ ॥ ೨ ॥

ಅಡಿಗಡಿಗೆ ಬಹ ವಿಘ್ನಸಂತತಿ।
ತಡೆದುನಿಲ್ಲಿಸಿ ನಿನ್ನ ಬಾಲರ।
ಸಿಡಲು ಕೊಡದಿರು ಮೂಢಭಾವದಿ, ಕಷ್ಟಗಳ ಸಹಿಸಿ ॥
ಸಡೆದು ಜೀವದ ಮೂಢಮೋಹನ।
ಬಿಡುತಲಿಷ್ಟಾನಿಷ್ಟ ಕಾರ್ಯಗ।
ಳೊಡನೆ ಧೈರ್ಯದಿ ಕಾದಿ ಜೀವನಕಲಹವನು ಗೆಲಲಿ ॥ ೩ ॥

ಕೋಟಿಜನತೆಯ ಜನನಿ ಮಾನವ।
ಕೋಟಿಯಲಿ ನಿನ್ನಣುಗರನು ಹುಲು।
ಕೀಟಗಳ ಪರಿ ಜನನ ಜೀವನ-ಮರಣಯಾತ್ರೆಗಳ ॥
ನಾಟಕದಿ ಕುಣಿಸಾಡಿ ಬಿಸುಡದೆ।
ಕೋಟಿವೀರರ ಜನನಿಯೆನಿಸಾ।
ಕೋಟಿ ಕನ್ನಡಿಗರಿಗೆ ಪಾಲಿಸು ಮಾನುಷತ್ವವನು ॥ ೪ ॥

ಪತನೋತ್ಥಾನ (ಪತನ+ಉತ್ಥಾನ) ಬೀಳುವದು ಏಳುವದು. ಪುತ್ರವತ್ಸಲೆ ಸ್ನೇಹಾರ್ತಜನನಿ-ಮಕ್ಕಳಲ್ಲಿ ವಾತ್ಸಲ್ಯವುಳ್ಳವಳೂ ಮಮತೆಯುಳ್ಳವಳೂ ಆದ ತಾಯಿ. ಅನುವು-ಅವಕಾಶ. ಹುಲುಕೀಟ-ಕ್ಷುದ್ರಕ್ರಿಮಿ.

## ಪ್ರಶ್ನೆಗಳು

೧. ಪರಸ್ತುತಿಯನ್ನು ಯಾಕೆ ಅಪೇಕ್ಷಿಸಬಾರದು?
೨. ನಮ್ಮ ಕಾರ್ಯದ ಧ್ಯೇಯವೇನಿರಬೇಕು?
೩. ಮೂರನೆಯ ಕವಿತೆಯ ಸರಳಾನುವಾದವನ್ನು ಬರೆಯಿರಿ.
೪. ವ್ಯವಹಾರದಲ್ಲಿ ನಾವು ಯಾವ ಮಾತುಗಳನ್ನು ಲಕ್ಷಿಸಿ ನಡೆಯಬೇಕು.
೫. ಮಾತೃಭೂಮಿ ಈ ಕವಿತೆಯಲ್ಲಿ ಹೇಳಿದ ವಿಚಾರಗಳನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.



## ೧೨. ಭಕ್ತನ ಬಿನ್ನಹ

**ಸ**ಕಲ ಸಂಪದವಿತ್ತೆ ಪಾಪಿಗೆ ।
ಸಕಲರಲಿ ಸಲೆ ಮಾನ್ಯನೆನಿಸಿದೆ ।
ಅಕಟ ದಯಮಾಡಿಲ್ಲವೆಂತೈ ಸುಖದ ಲೇಶವನು ॥
**ನಕಲ**ನುರೆ ತೋರಿಸಿದೆ ಲೋಕಕೆ ।
ಸುಖದ ಸಾಗರವೆನ್ನ ಮನವೆನೆ ।
ಅಕಟ! **ಅಸಲೀ**ವಾಗ ದುಃಖದ ಮೊಟ್ಟೆಯನು ಕೊಟ್ಟೆ ॥ ೧ ॥

**ಮೊಟ್ಟೆ-ಗಂಟು. ಲೇಶ-ತುಸ, ಸ್ವಲ್ಪ.**

**ಗಾ**ರುಡಿಗನುರೆ ಮೋಸಮಾಡುತ ।
ತೋರಿ ರೂಪಾಯಿಗಳ ಜನರಿಗೆ ।
ಆರರಿಯದಂದದಲಿ ಮುಷ್ಟಿಯ ಮುಚ್ಚಿ ಮರಿಹಾವ ॥
ದೂರದಲಿ ಕೈನೀಡಿ ಚೆಲ್ಲಲು (ಹಾಕಲು) ।
ಚೀರಿ ವಿಸ್ಮೃತಿವಡೆವ ಬಾಲನ ।
ನೂರುಮಡಿ ಮರೆಮೋಸವಾಯ್ತೆನಗೀ ಪ್ರಪಂಚದಲಿ ॥ ೨ ॥

**ನೀ**ವು ಪೇಳುವಿರಾನು ನಿಜಸುಖಿ ।
ಯಾವುದಕ್ಕೂ ಕೊರತೆಯಿಲ್ಲವು ।
ಪಾವನರೆ ಗೈವೆಂ ಪ್ರತಿಜ್ಞೆಯ ನಂಬಿರೀನುಡಿಯ ॥
‘ಈ ವಸುಧೆಯೊಳಗಾನು ಜನ್ಮಿಸಿ ।
ಈವರೆಗೆ ಕಂಡಿಲ್ಲ ಸೌಖ್ಯವ’ ।
ದೇವ! ಮುಂದೇನಿರ್ಪುದೋ ನಾನರಿಯೆ ನಿಜವನ್ನು ॥ ೩ ॥

**ಮುಂ**ದೆ ಸುಖವಹುದೆಂಬ ಪಿರಿದೆನಿ ।
ಪೊಂದು ಮೋಹಕ ಭಾವವೇ ನನು ।
ಗಿಂದು ಕಾರ್ಯಾಸಕ್ತಿಯೀಯುತಲೆಳೆದುಕೊಂಡೊಯ್ದು ॥

ಮುಂದೆ ಸುಖವಿದೆ ಮುಂದೆ ಸುಖವಿದೆ।
ಯೆಂದು ಕಿವಿಗಿನಿದುಸಿರಿ ಕೊನೆಯಲಿ।
ಕೊಂದು **ಮಣ್ಣಿನ ದೇಹನನು ಮಣ್ಣಿಗೆಯೆ** ಕೂಡಿಪುದು ॥ ೪ ॥

**ಕಿವಿಗೆ ಇನಿದ ಉಸಿರಿ—ಸವಿ ಮಾತುಗಳನ್ನು ಆಡಿ.**

**ಸು**ತರು ಸತಿ ಹಿತ ಬಾಂಧವರು ನಿಜ।
ಹಿತದ ಸಾಧನವಲ್ಲ ಲೋಕದೊ।
ಅತುಲಸಂಪದ ಸುಖಕೆ ಕಾರಣವಲ್ಲ ಬಾಂಧವರೇ ॥
ಹಿತದ ಸಾಧನೆಗೊಂದೆ ಮಾರ್ಗವ-।
ದತಿಸುಗಮವಾಗಿಹುದು; **ಶಾಂತಿಯೆ**।
**ಅತುಲಸುಖಕರ ಶೋಕಸಂತಾಪಾಪಹಾರಿಯದು** ॥ ೫ ॥

**( ಶಾಂತಿಯೆ ಅತುಲಸುಖಕರ. ಅದು–ಶಾಂತಿ, ಶೋಕ ಸಂತಾಪ+ಅಪಹಾರಿ )**

**ಸು**ಖದ ಸಾಗರವೆಂದು ತಿಳಿಯುವ।
ಸುಖದ ಸಂಸಾರದಲಿ ಸನ್ಮಯ।
ಸುಖದ ಹೆಸರಿನ ದುಃಖ ತುಂಬಿದೆ ನಂಬಿ ಬಾಂಧವರೇ ॥
ಸುಖದ ಭಾವನೆಯಿಂದ ಕೀಟವು।
ಸುಖವ ಪಡೆವುದು ನೋಡಿ ದೀಪವ।
ಸಖರೆ ನಿಜಸುಖವಿಲ್ಲ ಸಾರುವೆನೀ ಪ್ರಪಂಚದಲಿ ॥ ೬ ॥

**ಸೃ**ಷ್ಟಿಕರ್ತನು ಸೃಷ್ಟಿಕಾರ್ಯದೊ।
ಳೆಷ್ಟು ಮೋಸವ ಮಾಡಿಹನೊ ತಾಂ।
ಕಷ್ಟವೇ ಸುಖವೆಂಬ ಭಾವವ ನಂಬಿ ನಡೆವಂತೆ ॥
ಇಷ್ಟಸಾಧನೆಯೆಂಬ ಮೃಗಜಲ। (ಮರೀಚಿಕೆ)
ವೆಷ್ಟು ಕಣ್ಣಿಗೆ ರಮ್ಯವೆನಿಪುದೊ।
ಅಷ್ಟುಮಂತ್ಯದೆ ಕಷ್ಟಮಪ್ಪುದು ನಂಬಿ ಬಾಂಧವರೆ ॥ ೭ ॥

**ದೇ**ಹಗೇಹದ ಪಂಚಮಾರ್ಗದಿ।
ಮೋಹಮದ ಮೊದಲಾದ ರಿಪುಗಳು।
ಸಾಹಸದೊಳೊಳಸೇರಿ ಸತ್ವವ ಸೂರೆಗೊಳ್ಳುವರು ॥

ಈಹದನವರಿತೆಲವೊ ಸುಜನನೆ ।
ಕಾಪಿನಲಿ ಸುವಿವೇಕಶೂರನ ।
ದೇಹಗೇಹವನಿರಿಸಿ ಸತ್ವವ ಕಾದುಕೊಳ್ಳುವುದು ॥ ॥೮॥

**ದೇಹ ಗೇಹ—ಶರೀರವೆಂಬ ಮನೆ. ಹದನ-ರೀತಿ,ಗುಟ್ಟು.**

ಮನವು ಮರ್ಕಟನಂತೆ ಸಂಸೃತಿ।
ವನದಿ ವಿಹರಿಸುವಾಗಲಿಂದ್ರಿಯ ।
ಜನಿತ ಸುಖಸಂಪದವೆ ನಿಜಸುಖವೆಂದು ಮೋಹಿಸದೆ ॥
ಘನ ವಿವೇಕದ ಬಂಧನದೊಳಾ।
ಮನವನಿರಿಸುತ ಹರಿಯಚರಣದ ।
ನೆನೆಯುತನುದಿನವೆಸಗುತಿರುವುದು ಸ್ತುತ್ಯಕೃತ್ಯಗಳ ॥೯॥

**ಸಂಸೃತಿ ವನ (ಸಂಸೃತಿ-ಸಂಸಾರ)—ಸಂಸಾರವೆಂಬ ಅಡವಿ.**

ಮರೆಯಲಾರದು ಮನವು ಮೋಹವ ।
ತೊರೆಯಲಾರದು ತನುವು ( ಕುತನು ) ಬಾಹ್ಯದ ।
ಬರಿಯ ಬಯಕೆಯ, ಕಾಯಲಾರೆನು ಪಂಚಮಾರ್ಗದಲಿ ॥
ಹರಿವ ಮರ್ಕಟಮನವ, ಬಂಧಿಸ ।
ಲರಿಯೆನೈ ರಿಪುವರ್ಗವನು, ನೀಂ ।
ಕರುಣಿಸೈ ಶ್ರೀಹರಿಯೆ ಭಕ್ತನ ಕೊನೆಯ ಬಿನ್ನಹವ ॥೧೦॥
" ಹರಿಯೆ ನಿನ್ನೊಳು ಭಕ್ತಿಮುಕ್ತಿಗೆ।
ಸರಳಮಾರ್ಗವದೆಂಬುದರಿಯದೆ ।
ತಿರುತಿರುಗಿ ಮಾಯಾಪ್ರಪಂಚದಿ ಸುತ್ತಿಬೇಸತ್ತೆ ॥
ಪರಮಭಕ್ತಿಯೊಳೀಗ ನಿನ್ನಯ ।
ಚರಣತಲದಲಿ ಬಿದ್ದು ಬೇಡುವೆ ।
ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ " ॥೧೧॥

## ಪ್ರಶ್ನೆಗಳು

(೧) ಭಕ್ತನು ತನ್ನ ಜೀವನದ ಅನುಭವದಿಂದ ಏನು ಉಪದೇಶ ಮಾಡುವನು.

(೨) ಅವನು ತನ್ನ (ಮಾನವರ) ದುರ್ಬಲತೆಯನ್ನು ಹೇಗೆ ವರ್ಣಿಸಿರುವನು ?

(೩) ಭಕ್ತನ ಕೊನೆಯ ಪ್ರಾರ್ಥನೆಯೇನು ?

## ಸೂಚನೆಗಳು

೧. **ವಿದ್ಯಾರ್ಥಿಗಳು ತಾವೇ ಓದಿಕೊಳ್ಳುವಾಗ:** ಒಂದು ವಿಚಾರದ ಎಲ್ಲ ಕವಿತೆಗಳನ್ನೂ ಟಿಪ್ಪಣಿಗಳನ್ನೂ ಸಾವಕಾಶವಾಗಿ ಓದಲಿ. ಮುಂದಿರುವ ಪ್ರಶ್ನೆಗಳಿಗೆ ಉತ್ತರ ಕೊಡಲು ಯತ್ನಿಸಲಿ. ಆವಶ್ಯಕವೆನಿಸಿದಲ್ಲಿ ಶಿಕ್ಷಕರ ಸಹಾಯವನ್ನು ಕೋರಲಿ. ಬಳಿಕ ಶಿಕ್ಷಕರು ಹೆಚ್ಚಿನ ಪ್ರಶ್ನೆಗಳಿಂದ ಆ ಕವಿತೆಗಳ ಮರ್ಮವು ಮನದಟ್ಟಾಗುವದಕ್ಕೆ ಬೇಕಾದ ಹೆಚ್ಚಿನ ಉದಾಹರಣೆ ವಿವರಣೆಗಳ ಕಡೆಗೂ ಪ್ರತಿ ಕವಿತೆಯೊಳಗೆ ವಿಶೇಷ ಸಂಗತಿಗಳೇನಾದರೂ ಇದ್ದರೆ ಅವುಗಳ ಕಡೆಗೂ ಬಾಲಕರ ಲಕ್ಷ್ಯವು ಹೋಗುವಂತೆ ಮಾಡಲಿ. ವಿಶೇಷ ಸ್ವಾರಸ್ಯವುಳ್ಳ ಕವಿತೆಗಳನ್ನು ವಿದ್ಯಾರ್ಥಿಗಳು ಪಾಠಮಾಡಲಿ.

೨. **ಶಿಕ್ಷಕರು ಪಾಠ ಹೇಳುವಾಗ:** ಒಂದು ವಿಚಾರದ ಎಲ್ಲ ಕವಿತೆಗಳನ್ನು ಭಾವಬೋಧಕವಾಗಿ, ವಾಕ್ಯ, ವಾಕ್ಯಖಂಡ ಇಲ್ಲವೆ ಒಂದು ಅರ್ಥವನ್ನು ಸೂಚಿಸುವ ಪದಗಳ ಗುಂಪು, ಇವುಗಳ ಮುಂದೆ ನಿಂತು, ಅರ್ಥಾನುಗುಣವಾದ ಧ್ವನಿ ಹಾವಭಾವ ಅಭಿನಯಗಳೊಂದಿಗೆ ಓದಲಿ. ಶಬ್ದಕೋಶವನ್ನು ಮೊದಲೇ ಕ. ಹ. ಮೇಲೆ ಬರೆದಿರಲಿ. ಮುಖ್ಯ ಪ್ರಶ್ನೆಗಳಿಂದ ಇಡಿಯ ಕವಿತೆಯ ಭಾವವನ್ನು ವಿ. ಗಳಿಂದ ಹೊರಡಿಸಲಿ. ಬಳಿಕ ಒಂದೊಂದೆ ಕವಿತೆಯ ಸ್ವಾರಸ್ಯದ ಕಡೆಗೂ ಕವಿತೆಗಳೊಳಗಿನ ಪದಲಾಲಿತ್ಯ ಅರ್ಥಲಾಲಿತ್ಯಗಳ ಕಡೆಗೂ ವಿ. ಗಳ ಲಕ್ಷ್ಯವನ್ನು ಎಳೆಯಲಿ. ಪದಚ್ಛೇದ, ಅನ್ವಯ, ಪ್ರತಿಪದಾರ್ಥ, ವ್ಯಾಕರಣ, ರೂಪಸಿದ್ಧಿ ಹೀಗೆ ಪ್ರತಿ ಕವಿತೆಯನ್ನು ಹರಿದು ಅರೆದು ಕುಡಿಸಲು ಯತ್ನಿಸಬಾರದು. ಹಾಗೆ ಮಾಡುವದರಿಂದ ಕಾವ್ಯವಾಚನದಿಂದಾಗುವ ಆನಂದಕ್ಕೆ ಬದಲು ವಿದ್ಯಾರ್ಥಿಗಳಿಗೆ ಬೇಸರವುಂಟಾಗಿ ಕವಿತಾಪಾಠಗಳ ಉದ್ದೇಶಕ್ಕೇ ಭಂಗಬರುವದು.

೩. **ಸಾಮಾನ್ಯವಾಗಿ:** ಈ ಭಾಗದೊಳಗಿನ ಕವಿತೆಗಳ ಭಾವಗಳು ಪ್ರೌಢವಾಗಿರುವದರಿಂದ ಅದಕ್ಕನುಗುಣವಾಗಿ ಶೈಲಿಯೂ ಪ್ರೌಢವಾಗಿದೆ. ಕವಿ ರವೀಂದ್ರರ ಕವಿತೆಗಳ ಭಾವಗ್ರಹಣವು ಸುಲಭವಾಗಿರುವಷ್ಟೇ ಕಠಿಣವೂ ಆಗಿದೆ. ಬೇರೆ ಬೇರೆ ವಿದ್ಯಾರ್ಥಿಗಳ ... ಅನುಲಕ್ಷಿಸಿ, ಅವರ ಆಕಲನ ಸಾಮರ್ಥ್ಯವನ್ನು ... ರು ಅಂಥ ಕವಿತೆಗಳ ವಿವರಣೆಯನ್ನು ... ದ್ಧಿ ಸಂಸ್ಕಾರಕ್ಕೂ ನೀಗುವಷ್ಟೇ ಭಾರವ ... ಂದಲ್ಲದಿದ್ದರೆ ಮುಂದಾದರೂ ಈ ಕ ... ಸುವಷ್ಟು ಅವು ಪ್ರೌಢವಾಗಿವೆ.




---

...ಡಿಗೊಳಿಸಬಹುದೇ ? ...

...ರುಂಟಿಗೆ ಅಧಿಕಾರವಿಲ್ಲವೆ ? ಇವೀಗ ಸ್ಟೇಟ್ ಬ್ಯಾಂಕ್ ಆಫ್ ಇಂಡಿ...
...ಲ್ವಿಚಾರಣಾ ಅಧಿಕಾರಿಗಳ ಮುಷ್ಕರದಲ್ಲಿ ಅಡಕವಾಗಿರುವ ಮು...
...ು.

...ಕ ಸಂಬಳ ಪಡೆಯುತ್ತಿರುವ ಕೆಲವು ಸ್ಟೇಟ್ ಬ್ಯಾಂಕ್ ಅಧಿಕಾರಿಗ...
...ಕರಿಯು ಕರಾರನ್ನು ಉಲ್ಲಂಘಿಸಿ, ಮೆನೇಜ್‌ಮೆಂಟ್‌ನ ನ್ಯಾಯಸಮ...
...ಗಳನ್ನು ಪಾಲಿಸಲು ನಿರಾಕರಿಸಿದ್ದಾರೆ.

...ನೇಜ್‌ಮೆಂಟ್‌ನವರು ಮಾಡಿರುವುದು ಇಷ್ಟೆ: ತಮ್ಮ ಕ್ರಿಯೆಯಿ...
...ಗ್ರಾಹಕರಿಗೂ ಸಾರ್ವಜನಿಕರಿಗೂ, ತಪ್ಪಿಸಬಹುದಾಗಿದ್ದ ಅನಾನುಕ...
...ಟು ಮಾಡಿದ ಇಂತಹ ಅಧಿಕಾರಿಗಳ ವರ್ತನೆಯ ಕುರಿತು ಅ...
...

...ರೀತಿ ಪ್ರಶ್ನಿಸುವದು ಅವರು ಕೆಲಸಕ್ಕೆ ಬಾರದಿರಲು ಎಂದಾದರೂ
...ರಣವಾಗಬಹುದೆ ?

...ನೇಜ್‌ಮೆಂಟ್‌ನವರು ಈ ವಿವಾದಾಂಶಗಳನ್ನು ಜನತೆಯ ಅಭಿಪ್ರಾ...
...ನಪ ಮುಂದಿಡುತ್ತಾರೆ.

...ಟ್ ಬ್ಯಾಂಕಿನ ಅಧಿಕಾರಿಗಳು ಕೂಡ ಈ ವಿವಾದಾಂಶಗಳನ್ನು ನಿಷ್...
... ಪರಿಶೀಲಿಸಲಿ ಸೂಕ್ತ ಕಾರ್ಯಕ್ರಮವನ್ನು ಕೈಗೊಳ್ಳಲು ಅ...
...ುದಿರಲಿ.

...ರ ಕರ್ತವ್ಯ ಜ್ಞಾನವೇ ಅವರಿಗೆ ಮಾರ್ಗದರ್ಶಕವಾಗಲಿ.

# ...ೇಟ್ ಬ್ಯಾಂಕ್ ಆಫ್ ಇಂಡಿಯಾ...